









# ಸಿದ್ಧಗಂಗಾ

ಸಂಪುಟ-30. ಫೆಬ್ರವರಿ-1994.



# ಸಿದ್ಧಗಂಗಾ

ಸಂಪುಟ-30. ಸಂಚಿಕೆ-2. ಫೆಬ್ರವರಿ-1994.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಕಾಯಕ ಕಲ್ಯಾಣವೆ ದಾಸೋಹ ದಯನಿಧಿಯೆ
ಮಾನವೀಯತೆಯ ಶಿವಗಿರಿಯೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಜೋಳಿಗೆ ಸಿರಿತನ ನಾನೇನು ಹೇಳಲಿ
ನಡೆಸಿರುವೆನೀತಂದೆ ಮಠದಲ್ಲಿ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

§ § §

ಗುರು ಕೊಟ್ಟ ಜೋಳಿಗೆ ಹಿಡಿದು ಭಿಕ್ಷಕೆ ಹೊರಟೆ
ಚರಲಿಂಗವಾಗಿ ಚರಿಸಿದೆ। ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

— ಹೆಚ್. ವಿ. ವೀರಭದ್ರಯ್ಯ.

## ಶ್ರೀವಾಣಿ



ಸಂಸ್ಕೃತ ಭಾಷೆ ಸಂಪದ್ಭರಿತವಾದ ಭಾಷೆ. ಭರತ ಖಂಡದ ಸಂಸ್ಕೃತಿಯನ್ನು ಬಿತ್ತರಿಸುವ ಸಾಮರ್ಥ್ಯವುಳ್ಳದ್ದು. ಭಾರತದ ಎಲ್ಲ ಭಾಷೆಗಳಿಗೂ ಉದಾರವಾಗಿ ತನ್ನ ಶಬ್ದ ಸಂಪತ್ತನ್ನು ದಾನ ಮಾಡಿದ ಔದಾರ್ಯ ಸಂಸ್ಕೃತದ್ದು. ಜೀವನ ದರ್ಶನವನ್ನು ಉಪನಿಷತ್ತುಗಳ ಮೂಲಕ ಪರಿಚಯಿಸಿದ್ದು. ಜಗತ್ತಿನ ಬಹುದೊಡ್ಡ ಭಾಷಾ ಕುಟುಂಬಕ್ಕೆ ಸೇರಿದ ಪ್ರಧಾನ ಭಾಷೆ. ಇಂಡೋ ಯೊರೋಪಿಯನ್ ಭಾಷಾ ಪರಿವಾರಕ್ಕೆ ಸೇರಿದೆ. ಭಾರತೀಯರ ಹೆಮ್ಮೆಯಆಸ್ತಿ. ಆಧ್ಯಾತ್ಮಿಕತೆಯನ್ನು ಸ್ಪಷ್ಟ, ನೇರ ಮಾತುಗಳಲ್ಲಿ ಅಭಿವ್ಯಕ್ತಗೊಳಿಸಿದ್ದು ಜ್ಞಾನ ವಿಜ್ಞಾನ ತಂತ್ರಜ್ಞಾನಗಳೆಲ್ಲ ಸಂಸ್ಕೃತದಲ್ಲಿ ಮೈದೋರಿರುವುದನ್ನು ವಿಚಾರಶೀಲರಿಂದು ಪ್ರಕಟಪಡಿಸುತ್ತಿದ್ದಾರೆ. ಆಧುನಿಕ ಯುಗದ ಕಂಪ್ಯೂಟರ್‌ಗೂ ಕೂಡಾ ಸುಲಭವಾಗಿ ಅಳವಡುವ ಭಾಷೆ ಸಂಸ್ಕೃತವೆನ್ನುತ್ತಾರೆ ತಜ್ಞರು. ಕೃತ ಎಂದರೆ ಮಾಡಿದ್ದು ಎಂದರ್ಥ ಸಂಸ್ಕೃತ ಎಂದರೆ ಚೆನ್ನಾಗಿ ಮಾಡಿದ್ದು ಎಂದರ್ಥ. ಕೃಷಿ ಮಾಡಿದ ಭಾಷೆ ಸಂಸ್ಕೃತ. ದೇಶ ವಿದೇಶಗಳ ವಿದ್ವಾಂಸರು, ಅಭಿಮಾನಿಗಳು ಸಂಸ್ಕೃತವನ್ನು ಕಲಿಯುವುದಕ್ಕೋಸ್ಕರ ನಮ್ಮ ದೇಶಕ್ಕೆ ಬಂದು ಘನ ಪಂಡಿತರಾಗಿ ಜಗದ್ವಿಖ್ಯಾತರಾದುದನ್ನು ಇತಿಹಾಸ ಹೇಳುತ್ತಿದೆ. ವೇದಗಳು, ಉಪನಿಷತ್ತುಗಳು, ಶಾಸ್ತ್ರಗಳು, ಶ್ರೇಷ್ಠಕಾವ್ಯಗಳು ಸಂಸ್ಕೃತದಲ್ಲಿ ಬಂದಿವೆ. ದೇಶೀಯ ಭಾಷೆಯ ಮೇಲೆ ಪ್ರಭಾವ ಬೀರಿವೆ ಲೌಕಿಕ, ಧಾರ್ಮಿಕ ಶ್ರದ್ಧೆ ವಿಶ್ವಾಸಗಳನ್ನು ಕಾಲ ಕಾಲಕ್ಕೆ ಬೆಳೆಸುತ್ತ ಬಂದಿವೆ. ಭಾಷಾ ಕಲಿಕೆಯಿಂದ ಜೀವನ ಶ್ರೀಮಂತವಾಗುತ್ತದೆ. ಲೋಕ ದರ್ಶನಕ್ಕೆ ಸಹಾಯಕವಾಗುತ್ತದೆ. ನಮ್ಮ ದೇಶದಲ್ಲಿ ಸಂಸ್ಕೃತ ಒಂದು ಕಾಲದಲ್ಲಿ ವ್ಯಾವಹಾರಿಕ ಭಾಷೆಯಾಗಿತ್ತು. ಬರ ಬರುತ್ತ ಅದರ ಅಧ್ಯಯನ ಕಡಿಮೆಯಾಗುತ್ತ ಬಂದು ನಾವಿಂದು ಪರದೇಶದವರು ಸಂಸ್ಕೃತ ಗ್ರಂಥಗಳಿಗೆ ಬರೆದಿರುವ ವ್ಯಾಖ್ಯಾನಗಳ ಸಹಾಯದಿಂದ ಅಲ್ಪ ಸ್ವಲ್ಪ ಅರ್ಥಮಾಡಿಕೊಳ್ಳುವ ಸ್ಥಿತಿಗೆ ಬಂದಿದ್ದೇವೆ. ಈ ನಿರಭಿಮಾನ ಹೋಗಬೇಕು. ಭಾಷೆಯೆಂಬುದು ಅದ್ಭುತವಾದ ಬೆಳಕು. ಸಂಸ್ಕೃತ ಭಾಷೆ ಜಗತ್ತಿಗೇ ಬೆಳಕು ಕೊಟ್ಟ ಶ್ರೀಮಂತ ಭಾಷೆ.

(ದಿನಾಂಕ 29-1-94ರಂದು ಶ್ರೀಮಠದಲ್ಲಿ ಸಂಸ್ಕೃತೋತ್ಸವದಲ್ಲಿ ನೀಡಿದ ಆಶೀರ್ವಚನದಿಂದ ಸಂಗ್ರಹ)

**ಸಿದ್ಧಗಂಗಾ ಮಾಸ ಪತ್ರಿಕೆ**

**ಸಂಪಾದಕ ಮಂಡಳಿ :**

**ಚನ್ನಪ್ಪ ಎರೇಸೀಮೆ**
ಪ್ರಧಾನ ಸಂಪಾದಕರು.

**ಹೆಚ್. ವಿ. ವೀರಭದ್ರಯ್ಯ**
ಸಂಪಾದಕರು

**ಎಂ. ರೇಣುಕಾರಾಧ್ಯ**
ಸಹ ಸಂಪಾದಕರು

**ಸಲಹಾಸಮಿತಿ :**

ಡಾ॥ ಎಂ. ಎನ್. ಚನ್ನಬಸಪ್ಪ
ಡಾ॥ ಹೆಚ್. ತಿಪ್ಪೇರುದ್ರಸ್ವಾಮಿಗಳು
ಪ್ರೊ॥ ಹೆಚ್. ಎಸ್. ಸಿದ್ಧಲಿಂಗಯ್ಯ
ಗೊ. ರು. ಚನ್ನಬಸಪ್ಪ
ಎಚ್. ಎಸ್. ನರಸಿಂಹಜೀಯರ್
ಟಿ. ಆರ್. ಮಹದೇವಯ್ಯ
ಬಿ. ವೀರಭದ್ರಯ್ಯ
ಪಿ. ಎನ್. ಚಂದ್ರಶೇಖರಯ್ಯ

* * *

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು

* * *

**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ**
ಮುದ್ರಕರು.

* * *

ಶ್ರೀ ಸಿದ್ಧಗಂಗಾಕ್ಷೇತ್ರ
ಪ್ರಕಟಣೆಯ ಸ್ಥಳ.

**ಲೇಖಕರಲ್ಲಿ ಮನವಿ**

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ. ಮೇಲಾಗಿ ಶ್ರೀ ಮಠದ ಮುಖವಾಣಿ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ 30ನೇ **ವರ್ಷಕ್ಕೆ ಪಾದಾರ್ಪಣೆ ಮಾಡಿದೆ. ತ್ರಿವಿಧ ದಾಸೋಹ ತತ್ಪರತೆಯಿಂದ ಮುನ್ನಡೆಯುತ್ತಿರುವ ಪತ್ರಿಕೆ** ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

" ಸಂಪಾದಕರು ",
'ಸಿದ್ಧಗಂಗಾ' ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572104.

**ಚಂದಾ ದರ**
ವಾರ್ಷಿಕ ಚಂದಾ 30-00ರೂ
ಆಜೀವ ಸದಸ್ಯತ್ವ 350-00

# ಶ್ರೀ ಸಿದ್ಧಲಿಂಗೇಶ್ವರ ವಚನ



ಇಂದ್ರಿಯಂಗಳುಳ್ಳನ್ನಕ್ಕರ ಪ್ರಾಣಂಗೆ ಬಂಧನವಾಬುದೆ
ಭವದುಃಖಿಗಳಿರಾ।
ಇಂದ್ರಿಯಗಳನೆಲ್ಲವ ಲಿಂಗ ಸಂಧಾನವ ಮಾಡಬಲ್ಲರೆ
ಪ್ರಾಣನ ಬಂಧನ ಬಿಟ್ಟು ಓಡುವುದು ನೋಡಾ।
ಪ್ರಾಣಲಿಂಗವಾಗಿಯಲ್ಲದೆ ಪ್ರಳಯವ ಗೆಲಬಾರದು,
ಪ್ರಳಯ ಪ್ರಳಯದ ಹಳೆಯರಾಗಿಪ್ಪವರ
ಪ್ರಾಣಲಿಂಗ ಸಂಬಂಧಿಗಳೆಂಬೆನಯ್ಯಾ।
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವೇ।

ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ಧಾವಿಸಿ ವ್ಯವಹರಿಸುವ ತನಕ ಪ್ರಾಣನ ಬಂಧನ ತಪ್ಪಿದ್ದಲ್ಲ. ಅಂಥವರೆಲ್ಲರೂ ಸಂಸಾರದಿಂದ ದುಃಖಿಗಳೇ ಅಗುವರು. ಇಂದ್ರಿಯಗಳನ್ನು ವಿಷಯಗಳಿಂದ ಸೆಳೆದು ಅವನ್ನು ಲಿಂಗದಲ್ಲಿಯೇ ವ್ಯವಹರಿಸುವಂತೆ ಮಾಡುವವರು ಮಾತ್ರ ಪ್ರಾಣ ಬಂಧನದಿಂದ ಮುಕ್ತರಾಗಿ ಬಿಡುವರು. ಪ್ರಾಣವು ಲಿಂಗವಾಗುವ ತನಕ ಪ್ರಳಯ ತಪ್ಪಿದ್ದಲ್ಲ ಪ್ರಳಯಕ್ಕೊಳಗಾದವರೆಲ್ಲ ಪ್ರಾಣಲಿಂಗಿಗಳು ಹೇಗಾಗಬಲ್ಲರು?

( ಕೃಪೆ : ಷಟ್‌ಸ್ಥಲ ಜ್ಞಾನಸಾರಾಮೃತ- ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ, ಎಡೆಯೂರು-ಗದಗ)

# ಸಂಪಾದಕೀಯ

**ಕಾಯಕದಳ**

ಕಾಯಕ ತತ್ವ ಶರಣರು ಜಗತ್ತಿಗೆ ಕೊಟ್ಟ ಅಮೂಲ್ಯ ಕೊಡುಗೆ. ಆತ್ಮ ದರ್ಶನದ ಜತೆಗೆ ಲೋಕ ದರ್ಶನವನ್ನು ಮೂಡಿಸುವ ಪರಿಣಾಮಕಾರಿ ಮಾಧ್ಯಮ. ವ್ಯಕ್ತಿಯ ಅಹಂಕಾರ ನಿಠಸಕ್ಕೆ ತೆರೆದು ತೋರಿದ ಶಿವಪಥ. ಸ್ವಾಭಿಮಾನಕ್ಕೆ ಎತ್ತಿಹಿಡಿದ ಶಿವಧ್ವಜ. ಸಮಾಜ ಸೇವೆಗೆ ನಿರ್ಮಿಸಿದ ರಸಗವಾಕ್ಷ. ಸಮಷ್ಟಿ ಕಲ್ಯಾಣಕ್ಕೆ ಅರ್ಪಿಸಿಕೊಂಡ ಕೃತಾರ್ಥತೆ.

"ನನಗೆ ಬೇಕು ಎಂದು ದುಡಿದರೆ ವೃತ್ತಿ; ಸಂಸಾರ ಮುಖವಾದ ಪ್ರವೃತ್ತಿ. 'ನಿಮಗೆ' ಎತ್ತಾಗಿ ತೊತ್ತಾ, 'ನಿಮ್ಮಬಾಗಿಲು ಗಾಹಿಯಾಗಿ 'ನಿಮ್ಮ' ಆಳಿನ ಆಳಾಗಿ ನಿಮಗೆಂದು ಕಾಯಕಷ್ಟ ಮಾಡಿ ನಿರ್ವಂಚಿತ ಬುದ್ಧಿಯಿಂದ ದುಡಿದು ನಿಮ್ಮ ಸೊಮ್ಮನ್ನು ನಿಮಗೆ ಸಲ್ಲಿಸಿದರೆ ಅದು ಕಾಯಕ, ಅದು ದಾಸೋಹ-ಎನ್ನು-ತ್ತಾರೆ. ಸಂ, ಶಿ. ಭೂಸನೂರು ಮಠ.

" ಕಾಯಸ್ಥವಾಗಿರುವ ಆತ್ಮನನ್ನು ಅರಿಯಲು ಕಾಯಕವೇ ನೇರಮಾರ್ಗ. ಅಷ್ಟೇ ಅಲ್ಲ ವ್ಯಕ್ತಿಯ ಉದ್ಧಾರದ ಜೊತೆಗೆ ಜಂಗಮ ಶೀಲವಾದ ಸಮಾಜದ ಉದ್ಧಾರವೂ ಕಾಯಕದಿಂದ ನಡೆಯಬಲ್ಲದು. ಕಾಯಕ ಗುರು-ಲಿಂಗ-ಜಂಗಮದಷ್ಟೇ ಪೂಜಾರ್ಹ" ವೆನ್ನುತ್ತಾರೆ ಪರಮಪೂಜ್ಯ ಶ್ರೀ ಶ್ರೀ ಗಳವರು. ಕಾಯಕಗಳ ಒಂದು ಸೇವಾಶೀಲ ವ್ಯವಸ್ಥೆ ಸ್ವಪ್ರೇರಣೆಯಿಂದ ಮೂಡಿ ಬಂದಿರುವ ನಮ್ರ ಸಮೂಹ. ಪ್ರೀತಿ ಸ್ನೇಹಗಳ ಒಕ್ಕೂಟ. ಪರಿಸರ ನೈರ್ಮಲ್ಯವನ್ನು ಸಂರಕ್ಷಿಸಿ ಕೊಂಡು ಬರುವ ಸದುದ್ದೇಶದಿಂದ ರೂಪಿತವಾದದು. ಸದಸ್ಯತ್ವದ ಶುಲ್ಕವಿಲ್ಲ. ವಯೋಮಿತಿಯಿಲ್ಲ. ಹೆಣ್ಣು-ಗಂಡು ಎಂಬ ಭಿನ್ನ ಭಾವನೆಯಿಲ್ಲ. ಬಡವ-ಬಲ್ಲಿದರೆಲ್ಲ ಇಲ್ಲುಂಟು. ಅಧಿಕಾರಿ-ನೌಕರರೆಲ್ಲ ಇಲ್ಲಿ ಸಮಾನಸ್ಕಂಧರು. ಹರ-ಗುರು-ಚರಮೂರ್ತಿ ಗಳೂ ಪೊರಕೆ ಹಿಡಿದಿಲ್ಲಿ ದುಡಿವ ಅವಕಾಶ. ಯಾರೂ ಇಲ್ಲಿ ದೊಡ್ಡವರಲ್ಲ; ಯಾರೂ ಚಿಕ್ಕವರಲ್ಲ. ಎಲ್ಲರೂ ಪವಿತ್ರ ಮಣಿಹಕ್ಕೆ ಬಂದ ಪುಣ್ಯ ಜೀವಿಗಳು.

ಶ್ರೀ ಮಠದ ಪರಿಸರವನ್ನು ಶುದ್ಧವಾಗಿಡುವ, ಸ್ವಚ್ಛವಾಗಿರುವಂತೆ ಪ್ರಯತ್ನಿಸುವ ಸದ್ಭಾವದಿಂದ ಕೆಲಸವನ್ನಾರಂಭಿಸಿದೆ. ಪ್ರತಿ ಭಾನುವಾರ ಪ್ರಾತಃಕಾಲ ಎಂಟುಘಂಟೆಯಿಂದ ಒಂಬತ್ತು ಘಂಟೆಯುವರೆಗೆ ಸೇವೆಯಲ್ಲಿ ನಿರತರಾಗುವ ಸಂಕಲ್ಪ. ಅಲ್ಪ ಪ್ರಮಾಣದಲ್ಲಿ ಪ್ರಾರಂಭವಾಗಿರುವ ಕಾಯಕದಳದಲ್ಲಿ ಎಲ್ಲರಿದ್ದಾರೆ. ಪ್ರೇರಣೆ ನೀಡಿ ಸಹಕರಿಸುತ್ತಿರುವ ಶ್ರೀ ಟಿ.ಕೆ. ನಂಜುಂಡಪ್ಪನವರ ಸರಳ ಸಜ್ಜನಿಕೆಯ ಸಾಹ-ಚರ್ಯವಿದೆ. ಸದಸ್ಯರಲ್ಲಿ ಆಲಸ್ಯ, ಅನ್ಯಭಾವ ಬರದಂತಹ ಆತ್ಮೀಯ ಮಾತುಗಳಿಂದ



'ಕಾಯಕದಳ' ದ ಕಣ್ಣಾಗಿ ಸದಾ ಎಚ್ಚರಿಕೆಯಿಂದ ನೋಡಿಕೊಳ್ಳುವ ಹೃದಯ ವಂತಿಕೆಯುಳ್ಳ ಅನುಭವಿಗಳಿದ್ದಾರೆ. ನಗು ನಗುತ್ತಲೇ ನೈರ್ಮಲ್ಯ ಕಾರ್ಯದಲ್ಲಿ ಉತ್ಸಾಹದಿಂದ ಭಾಗಿಗಳಾಗುವ ಎಳೆಯರಿದ್ದಾರೆ. ಕಾಲೇಜುಗಳ ಪ್ರಿನ್ಸಿಪಾಲರಿದಾರೆ. ಪ್ರಾಧ್ಯಾಪಕರಿದ್ದಾರೆ, ಮುಖ್ಯೋಪಾಧ್ಯಾಯರಿದ್ದಾರೆ, ಅಧ್ಯಾಪಕರಿದ್ದಾರೆ, ಶ್ರೀಮಠದ ಸೇವಾ ಸಿಬ್ಬಂದಿ ಮುಖ್ಯರಿದ್ದಾರೆ. ಪ್ರತಿ ಭಾನುವಾರ ಕ್ಲುಪ್ತ ವೇಳೆಗೆ ಹಾಜರಾಗುತ್ತಾರೆ. ಪರಸ್ಪರ ಸಲಹೆ, ಸೂಚನೆ, ನಿರ್ದೇಶನ, ಸಹಕಾರಗಳಿಂದ ಶ್ರಮದಾನದಲ್ಲಿ ನಿರತರಾಗುತ್ತಾರೆ. ಯಾರೂ ಯಾರಿಂದಲೂ ಏನನ್ನೂ ನಿರೀಕ್ಷಿಸುವುದಿಲ್ಲ; ಆತ್ಮ ಸಂತೋಷಕ್ಕಾಗಿ ಭಾಗವಹಿಸುತ್ತಾರೆ.

ನೈರ್ಮಲ್ಯಕ್ಕೆ ತೊಡಗುವ ಮೊದಲು ಪ್ರಾರ್ಥನೆ. ನೈರ್ಮಲ್ಯ ಕಾರ್ಯದ ಕೊನೆಯಲ್ಲಿ ಶಾಂತಿಮಂತ್ರ. ರಾಷ್ಟ್ರಕ್ಕೆ ಒಳ್ಳೆಯದಾಗಲಿ ಎಂಬ ಶುಭ ಘೋಷಣೆಯೊಂದಿಗೆ ಮುಕ್ತಾಯ.

"ಕಾಯಕದಳ" ದ ಪವಿತ್ರ ಮಣಿಹಕ್ಕೆ "ಸಿದ್ಧಗಂಗಾ" ತುಂಬು ಹೃದಯದ ಶುಭಾಶಯಪೂರ್ಣ ಅಭಿನಂದನೆಗನ್ನು ಅರ್ಪಿಸುತ್ತದೆ.

---

ಕೃಷಿ ಕೃತ್ಯ ಆವ ಕಾಯಕದಿಂದಾದೊಡೇನು ? ತನು ಮನ ಬಳಲಿಸಿ ಗಳಿಸಿ ತಂದು, ಗುರುಲಿಂಗಜಂಗಮಕ್ಕೆ ಮೆಚ್ಚಿಸಿ ದಾಸೋಹವ ಮಾಡುವ ಪರಮಸದ್ಭಕ್ತನ ಪಾದವ ತೋರಯ್ಯಾ ಎನಗೆ. ಅದೆಂತೆಂದೊಡೆ, ಆತನ ತನು ಶುದ್ಧ, ಆತನ ಮನ ಶುದ್ಧ, ಆತನ ನಡೆ ಶುದ್ಧ, ನುಡಿ ಎಲ್ಲ ಪಾವನವು. ಆತಂಗೆ ಉಪದೇಶವ ಮಾಡಿದಾತನೆ ಪರಮಸದ್ಗುರು. ಅಂತಪ್ಪ ಸದ್ಭಕ್ತನ ಮನೆಯು ಕೈಲಾಸವೆಂದು ಹೊಕ್ಕು ಲಿಂಗಾರ್ಚನೆಯ ಮಾಡುವ ಜಂಗಮವೇ ಜಗತ್ಪಾವನ. ಇಂತಪ್ಪ ಗುರು ಶಿಷ್ಯ ಜಂಗಮಕ್ಕೆ ನಾನು ನೆರೆನಂಬಿ ನಮೋ ನಮೋ ಎಂಬೆನಯ್ಯಾ ಕೂಡಲಚೆನ್ನಸಂಗಮದೇವಾ.

ಅಸಿಯಾಗಲಿ ಕೃಷಿಯಾಗಲಿ ಯಾಚಕ ವಾಣಿಜ ಮಸಿಯಾಗಲಿ ಮಾಡುವಲ್ಲಿ ಹುಸಿಯಿಲ್ಲದಿರಬೇಕು. ಅದು ಅಸಮಾಕ್ಷನ ಬರವು, ಪಶುಪತಿಯ ಇರವು. ಐಘಟದೂರ ರಾಮೇಶ್ವರಲಿಂಗವು ತಾನೆ.

**ಚೆನ್ನಬಸವಣ್ಣ**

(ಮುಂದುವರಿದ ಲೇಖನ) ಕಂತೆಕಾಯಕ—ವಿ. ಎಸ್. ಶಿವಲಿಂಗಯ್ಯ

## "ಚಿದ್ರಸನ" (ಕಂತಿ) ತಯಾರಿಸುವ ವಿಧಾನ

**ಗೇರುಬೀಜ ಅಂದರೆ ಕಾಡುಗೇರು ಬೀಜನನ್ನು ಶುದ್ಧಿಮಾಡುವ ಕ್ರಮ:-**

ಬಲಿತ, ಕಪ್ಪು ಬಣ್ಣವನ್ನುಳ್ಳ ಗೇರುಬೀಜವನ್ನು ಸಂಗ್ರಹಿಸಬೇಕು. ಚಿದ್ರಸವನ್ನು ತಯಾರಿಸುವ(ಚೌಕಿಗೆ)ಸ್ಥಳಕ್ಕೆ ಸಂಗ್ರಹಿಸಿದ ಗೇರುಬೀಜವನ್ನು ತರಬೇಕು.

ಮೊದಲು ಚಿದ್ರಸವನ್ನು ತಯಾರಿಸಲು ಆಯ್ಕೆ ಮಾಡಿದಸ್ಥಳ (ಚೌಕಿ)ಯನ್ನು ಗೋಮಯ (ಸಗಣಿ)ಯಿಂದ ಸಾರಿಸಿ, ರಂಗೋಲಿಯನ್ನು ಹಾಕಿ, ಶ್ರೀ ಗುರು ಪಾದೋದಕದಿಂದ ಶುದ್ಧಿ ಮಾಡಬೇಕು. ಅನಂತರ ತ್ರಿಕೋಣಾಕಾರವಾಗಿ ಒಲೆ ಗುಂಡಿನೋಪಾದಿಯಲ್ಲಿ ಒಂದು ಅಡಿ ಆಳ, ಒಂದು ಅಡಿ ಉದ್ದವಿರುವಂತೆ ಮೂರು ಗುಂಡಿಗಳನ್ನು ತೆಗೆಯಬೇಕು. ಈ ಗುಂಡಿಗಳ ಒಳಗೆ ಮೂರು ಸೇರು ನೀರು ಹಿಡಿಯುವಷ್ಟು ಮೂರು ಮಣ್ಣಿನ ಮಡಕೆಗಳನ್ನು ಇಡಬೇಕು. ಮಡಕೆಗಳ ಮೇಲೆ ಅರ್ಧಅಂಗುಲ ರಂಧ್ರವಿರುವ ಮುಚ್ಚಳಗಳನ್ನು ಒಂದೊಂದರ ಮೇಲೂ ಮುಚ್ಚಬೇಕು. ಅನಂತರ ಸಂಗ್ರಹಿಸಿದ ಗೇರುಬೀಜಗಳನ್ನು ಹತ್ತುಸೇರುಪ್ರಮಾಣ ಹಿಡಿಯುವ ಮೂರು ಮೂರು ಮಣ್ಣಿನ ಕೊಡಗಳಿಗೆ ಅಂದರೆ ಗಡಿಗೆಗಳಿಗೆ ತುಂಬಿ ಮೇಲೆ ಹೇಳಿದ ಗುಂಡಿಗಳಲ್ಲಿರಿಸಿದ ಮಡಕೆಗಳಮೇಲೆ ಮುಚ್ಚಿರುವ ಮುಚ್ಚಳಗಳ ಮೇಲೆ ಬೋರಲು ಇಡ ಬೇಕು.

ಈ ಗಡಿಗೆಗಳ ಒಳಗೆ ಧೂಳು, ಮಣ್ಣು ಸೇರದಂತೆ ಅವುಗಳ ಸಂದಿಗೆ ಸಗಣಿಯ ಮೆತ್ತಿ ಕುತ್ತಿಗೆಯವರೆಗೆ ಧೂಳು ಮಣ್ಣನ್ನು ಹೊರಭಾಗದಲ್ಲಿ ಮುಚ್ಚಬೇಕು. ಇದಾದಮೇಲೆ ಗಡಿಗೆಗಳ ಸುತ್ತ ಬೆರಣಿಗಳನ್ನು (ಕಾಡುಬೆರಣಿಯಾದರೆ ಶ್ರೇಷ್ಠ) ಸಂದಿಲ್ಲದಂತೆ ಜೋಡಿಸುವುದು ಜೋಡಿಸಿದ ಬೆರಣಿಗಳಮೇಲೆ ತೆಂಗಿನ ಗರಿ ಅಥವಾ ಒಣಹುಲ್ಲನ್ನು ಹರಡಿ ಬೆಂಕಿಯನ್ನು ಹಾಕಬೇಕು. ಬೆರಣಿಗಳು ಬೆಂದಮೇಲೆ ಮತ್ತೊಮ್ಮೆ ಬೆರಣಿಯನ್ನು ಜೋಡಿಸಬೇಕು. ಬೆಂಕಿ ಉರಿಯುತ್ತಿರುವಾಗ ಗಡಿಗೆ ಮತ್ತು ಬೆಂಕಿ ಭಿನ್ನವಿಲ್ಲದೆ ಕೆಂಡದಂತಿರಬೇಕು. ಈ ಸ್ಥಿತಿಯಲ್ಲಿ ಗಡಿಗೆಯೊಳಗಿನ ಗೇರುಬೀಜಗಳು ಪಟ ಪಟ ಸಿಡಿವ ಶಬ್ದ ಬರುವುದನ್ನು ಕಿವಿಗೊಟ್ಟು ಗಮನಿಸಬೇಕು. ಬೀಜ ಹೀಗೆ ಸಿಡಿದಾಗ ಅದರೊಳಗಿನ ಗೇರುತುಪ್ಪ ಬರುತ್ತಿದೆ ಎಂದು ಸ್ಪಷ್ಟ ಪಡಿಕೆಕೊಂಡು ಸಂದಿರುವ ಜಾಗದಲ್ಲಿ ಬೆರಣಿಗಳನ್ನು ಇಟ್ಟು ನಿಲ್ಲಿಸಬೇಕು. ಈ ಗೇರು ತುಪ್ಪವನ್ನು ತೆಗೆಯುವ ಕ್ರಮವನ್ನು ಸಂಜೆ ಆರು ಅಥವಾ ಏಳು ಘಂಟೆಗೆ ಪ್ರಾರಂಭಿಸಿ ರಾತ್ರಿ ಹನ್ನೆರಡು ಘಂಟೆಯೊಳಗೆ ಬಹಳ ಎಚ್ಚರಿಕೆಯಿಂದ ಗೇರುತುಪ್ಪವನ್ನು ಸಂಗ್ರಹಿಸಬೇಕು. ಬೆಂಕಿ ಸಾಲದೆ ಹೋದರೆ ಎಣ್ಣೆ ಗಡಿಗೆಯೊಳಗಡೆ ಸುತ್ತಿಕೊಂಡು ಬಿಡುವುದರಿಂದ ಎಚ್ಚರವಾಗಿ ಬೆಂಕಿಯನ್ನು ಹಾಕಬೇಕು. ಅನಂತರ ಬೆಳಗ್ಗೆ ಆರು ಘಂಟೆಗೆ ಆ ಬೆರಣಿ ಬೂದಿಯನ್ನೆಲ್ಲಾ ಸಂಗ್ರಹಿಸಬೇಕು. ತರುವಾಯ ಮೇಲಿನ ಮೂರು ಗಡಿಗೆಗಳನ್ನು ತೆಗೆದು ತಳದಲ್ಲಿ ಗೇರುತುಪ್ಪವಿಳಿದಿರುವ ಮೂರು ಮಡಿಕೆಗಳನ್ನು ಧೂಳು ಕಸ ಕಡ್ಡಿಗಳು ಬೀಳದಂತೆ ಜೋಪಾನವಾಗಿ ಗುಂಡಿಗಳಿಂದ ಮೇಲಕ್ಕೆ ತೆಗೆದುಕೊಂಡು ಸುಮಾರು ಮೂರು ಕೊಡ ನೀರು ಹಿಡಿಯುವ ದೊಡ್ಡ ಮಡಕೆಗೆ ತೆಳುವಾದ ಬಟ್ಟೆಯನ್ನು ಬಾಯಿಗೆ ಕಟ್ಟಿ ಸಂಗ್ರಹಿತವಾದ ಮಡಕೆಗಳೊಳಗಿನ ಗೇರು ತುಪ್ಪವನ್ನು ಶೋಧಿಸಿಕೊಳ್ಳಬೇಕು.

(ಮುದುವರಿಯುವುದು)

# ಕನ್ನಡದ ಉಳಿವು ಕನ್ನಡಿಗನ ಉಳಿವು

ಡಾ॥ ಸಂಜೀವ ಶೆಟ್ಟಿ, ಮುಖ್ಯಸ್ಥರು, ಕೆ.ಜೆ. ಸೋಮಯ್ಯ ಕಲಾ ಮತ್ತು ವಾಣಿಜ್ಯ ಕಾಲೇಜು
ವಿದ್ಯಾವಿಹಾರ (ಪೂರ್ವ) ಮುಂಬಯಿ-400 077.

ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಅಗ್ರಸ್ಥಾನ ಸಿಗದಿದ್ದರೆ ಮತ್ತೆಲ್ಲಿ ಸಿಗುವುದು? ಮನೆಯೊಳಗೆ ಬಿರುಕುಂಟಾಗಿ ಮನೆಯ ಸದಸ್ಯರು ಪರಸ್ಪರ ಕಲಹದಲ್ಲಿ ತೊಡಗಿದರೆ ಕನ್ನಡಕ್ಕಲ್ಲದೆ ಮತ್ಯಾರಿಗೆ ನಷ್ಟ? ಕನ್ನಡದಲ್ಲಿ ಶ್ರೀಮಂತ ಸಾಹಿತ್ಯವಿದೆ; ಹಳೆಯ ಭಾಷೆಗಳಲ್ಲಿ ಒಂದಾಗಿದೆ; ಒಂದುವರೆ ಸಾವಿರ ವರುಷಗಳ ಸಾಹಿತ್ಯಕ ಇತಿಹಾಸ ಇದೆ ಎಂದೆಲ್ಲಾ ವೇದಿಕೆಗಳಲ್ಲಿ ಹೇಳುವುದರಿಂದ ಲೇಖನಗಳಲ್ಲಿ ಬರೆಯುವುದರಿಂದಲೇ ಕನ್ನಡದ ಸ್ಥಾನ ಬಲಿಷ್ಠವಾಗುವುದಿಲ್ಲ. ಇಂದು ಕರ್ನಾಟಕದ ಪ್ರತಿಯೊಬ್ಬನು ಕನ್ನಡದ ಬಗ್ಗೆ ಅಭಿಮಾನ ತಳೆಯುವಂತೆ ಕಾರ್ಯ ಪ್ರವೃತ್ತನಾಗಬೇಕಾದ ಪರಿಸ್ಥಿಯುಂಟಾಗಿರುತ್ತದೆ.

ಭಾರತದ ಯಾವುದೇ ಭಾಷಿಕರಾಜ್ಯದಲ್ಲಿ ಕರ್ನಾಟಕದಲ್ಲಿ ಕನ್ನಡಕ್ಕೆ ಇದ್ದಂತಹ ಸಮಸ್ಯೆಗಳು ಅಲ್ಲಿಯ ಪ್ರಧಾನ ಭಾಷೆಗಿಲ್ಲ ಕನ್ನಡ ಕಾವಲು ಸಮಿತಿ, ರಕ್ಷಣಾ ಸಮಿತಿ ಗೋಕಾಕ ಚಳವಳಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಎಪ್ಪತ್ತೇಳು ಶಾಸಕರು ಇಂಗ್ಲಿಷ್ ಶಾಲೆ ಬೇಕೆಂದು ಒತ್ತಾಯಿಸಿದ ಕ್ರಮ ಮುಂತಾದವುಗಳನ್ನು ಗಮನದಲ್ಲಿಟ್ಟುಕೊಂಡಾಗ ಕನ್ನಡದ ಸ್ಥಾನವೆಲ್ಲಿದೆಂಬುದು ಸ್ಪಷ್ಟ ತಿಳಿವಳಿಕೆ ಸಹೃದಯ ಕನ್ನಡಿಗರಲ್ಲುಂಟಾಗುವುದು ನಿಸ್ಸಂದೇಹಕರವಾಗಿದೆ. ಭಾಷೆಯು ಶಾಸನದಲ್ಲಿ, ವ್ಯವಹಾರದಲ್ಲಿ, ಶಿಕ್ಷಣದಲ್ಲಿ, ಮಹತ್ವ ಪಡೆದಾಗ ಬಾಳುತ್ತದೆ ಜನ ಜೀವನಾಡಿಯಲ್ಲಿ ಸ್ಪಂದಿಸುತ್ತದೆ. ಅದು ಮಹತ್ವವನ್ನು ಕಳೆದುಕೊಂಡಾಗ ಭಾಷಿಕ ಜನ ಸಂಖ್ಯೆ ಕ್ಷೀಣಿಸಿದಂತೆ ಭಾಷೆಯು ಕ್ಷಯವಾಗುತ್ತಲೇ ಹೋಗುತ್ತದೆಂಬುದಕ್ಕೆ ಸಂಸ್ಕೃತ, ಪ್ರಾಕೃತ, ಅರ್ಧಮಾಗದಿ ಮುಂತಾದ ಪ್ರಾಚೀನ ಶ್ರೀಮಂತ ಭಾಷೆಗಳನು ನಾವು ಉದಾಹರಣೆಗೆ ತೆಗೆದುಕೊಳ್ಳಬಹುದು. ಕನ್ನಡ ಬೇಡ ಎನ್ನುವವರು ಇಂಗ್ಲೀಷ್, ಹಿಂದಿ ಭಾಷೆಗಳನ್ನೇಕೆ ಕಲಿಯುತ್ತಾರೆ? ಹಾಗಾದರೆ ಕನ್ನಡವು ಕರ್ನಾಟಕದಲ್ಲಿಯ ಮಹತ್ವದ ಭಾಷೆಯೆಂಬ ತಿಳವಳಿಕೆಯನ್ನುಂಟುಮಾಡಬೇಕಾಗಿದೆ; ಅನಾವಶ್ಯಕ ವಸ್ತುಗಳನ್ನು ಮನುಷ್ಯರು ಸಹಜವಾಗಿಯೇ ದೂರಮಾಡುತ್ತಾರೆ.

ಒಳನಾಡಿನಲ್ಲಿಯ ಕನ್ನಡಿಗರ ದೌರ್ಬಲ್ಯ ಹೊರನಾಡ ಕನ್ನಡಿಗರ ಮೇಲೆ ಭೀಕರ ಪರಿಣಾಮ ಬೀರುತ್ತದೆ. ಕರ್ನಾಟಕದಲ್ಲಿ ಕನ್ನಡಾಭಿಮಾನದ ಕೊರತೆಯು ಹೊರನಾಡ ಕನ್ನಡಿಗರ ಸಮಸ್ಯೆಯಾಗುತ್ತದೆ. ಕರ್ನಾಟಕದಲ್ಲಿ ಕನ್ನಡತನ, ಕನ್ನಡಾಭಿಮಾನ ಬಲಗೊಂಡಂತೆ ಹೊರನಾಡ ಕನ್ನಡಿಗರಲ್ಲೂ ಅಭಿಮಾನ ಹೆಚ್ಚಾ

ಗುವಂತೆ, ಧೈರ್ಯ ತಳೆಯುವಂತೆ, ಸಂಕಟವೊದಗಿದಾಗ ನಮ್ಮವರಿದ್ದಾರೆ; ತಾಯ್ನಾಡಿದೆ; ಸಹಾಯಕ್ಕೆ ಬಂದಾರು; ಎಂಬ ಹಿನ್ನಲೆಯಲ್ಲಿ ಕನ್ನಡತನ ಉಳಿಸಿ ಕನ್ನಡಾಭಿಮಾನಿ ಬಾಳಲು ಪ್ರೇರಕ ಪೋಷಕವಾಗುತ್ತೆಂಬುದು ಅರಿವು ಜಾಗೃತವಾಗಿ ತದ್ರೀತಿಯಲ್ಲಿ ಕಾರ್ಯಪ್ರವೃತ್ತರಾಗುವಂತೆ ಮಾಡುತ್ತದೆ ಹೊರನಾಡ ಕನ್ನಡಿಗರ ಕರ್ನಾಟಕದೊಡನಿರುವ ಕರುಳಬಳ್ಳಿ ಸಂಬಂಧ ಇನ್ನಷ್ಟು ನಿಕಟವಾಗುವಂತೆ ಪೋಷಕವಾಗುವುದು.

ಸರಕಾರ ಕೇವಲ ಆದೇಶ ಹೊರಡಿಸಿ ಕನ್ನಡ ಭಾಷೆಯನ್ನು ಆಡಳಿತ ಭಾಷೆಯನ್ನಾಗಿ ಘೋಷಿಸಿದ್ದೇವೆ ಎಂದರೆ ಸಾಲದು; ಆಡಳಿತೆಯ ಪ್ರತಿಯೊಂದು ಕ್ಷೇತ್ರದಲ್ಲಿ ಹಂತ ಹಂತವಾಗಿ ಕ್ರಮಬದ್ಧ ರೀತಿಯಲ್ಲಿ ಕನ್ನಡವನ್ನು ಜಾರಿಗೆ ತಂದು ಕನ್ನಡವನ್ನುಳಿಸುವ ಬ್ರಹ್ಮದೀಕ್ಷೆಯನ್ನು ತಳೆಯಬೇಕು. ಶ್ರೀ ಸಾಮಾನ್ಯನು ಕನ್ನಡವನ್ನು ಉಳಿಸಿ ಬೆಳೆಸುವ ದಿಶೆಯಲ್ಲಿ ಜಾಗೃತ ಪಾತ್ರವಹಿಸುವಂತೆ ಶ್ರೀ ಸಾಮಾನ್ಯರಲ್ಲಿ ಭಾಷಾ ಜನಜಾಗೃತಿಯನ್ನುಂಟು ಮಾಡಬೇಕು. ಪ್ರತಿಯೊರ್ವ ಕನ್ನಡಿಗನು ತ್ರಿಕರಣ ಪೂರಕವಾಗಿ ಪ್ರಾಮಾಣಿಕತೆಯಿಂದ ನಡೆನುಡಿಯಲ್ಲಿ ಕನ್ನಡಕ್ಕಾಗಿ ಹೋರಾಡುವ ದೀಕ್ಷಾಬದ್ಧನಾಗಬೇಕು. ಕನ್ನಡಿಗರು ತಮ್ಮ ಮಾತೃಭಾಷೆಯ ಬಗ್ಗೆ ರೌದ್ರಮಾನಸರಾಗದೆ ಛಿದ್ರಮಾನಸರಾಗದೆ ಭದ್ರಮಾನಸರಾಗಿ ತಾಯ್ನುಡಿಯ ಏಳಿಗೆಗೆ ತುಂಬಿದ ಸದಭಿಮಾನದಿಂದ ದುಡಿಯುವ ಪ್ರತಿಜ್ಞೆಯನ್ನು ನಿರಂಕುಶಮತಿಗಳಾಗಿ ಸ್ವೀಕರಿಸಬೇಕು ಕನ್ನಡ ಉಳಿದರೆ ಕನ್ನಡಿಗ ಉಳಿಯುತ್ತಾನೆ. ಕನ್ನಡ ಅಳಿದರೆ ಕನ್ನಡಿಗ ಅಳಿಯುತ್ತಾನೆ ಕರ್ನಾಟಕ ಅಳಿಯುತ್ತದೆ. ಆದುದರಿಂದ ಕನ್ನಡಿಗನ ಉಳಿವಿಗೆ ಕನ್ನಡ ಉಳಿವು ಅಗತ್ಯವೆಂಬುದನ್ನು ನಾವೆಲ್ಲರು ತಿಳಿದು ಮುನ್ನಡೆಯೋಣ.

(ಸೌಜನ್ಯ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ–583211)

---

### ವಚನ

ಗುರುವಚನದಿಂದಲ್ಲದೆ ಲಿಂಗವನರಿಯಬಾರದು. ಗುರುವಚನದಿಂದಲ್ಲದೆ ಜಂಗಮವನರಿಯಬಾರದು. ಗುರುವಚನದಿಂದಲ್ಲದೆ ಪ್ರಸಾದವನರಿಯಬಾರದು. ಗುರುವಚನದಿಂದಲ್ಲದೆ ತನ್ನ ತಾನರಿಯಬಾರದು. ಹಿಂದಣ ಜನ್ಮದಲ್ಲಿ ಲಿಂಗವ ಪೂಜಿಸಿ ಇಾದು ಜ್ಞಾನೋದಯವಾದರೆ. ಗುರುವಿಲ್ಲದ ಮುನ್ನ ಆಯಿತ್ತೆನ್ನಬಹುದೇ? ತನ್ನಲ್ಲಿ ತಾನು ಸನ್ನಿಹಿತವಾದಹೆನೆಂದಿರೆ ಗುರುವಿಲ್ಲದೆ ಆಗದು ಕೇಳಾ. ಎನ್ನ ಅಜಗಣ್ಣನೆಂಬ ಗುರುವಿಲ್ಲದೆ ಆ ರೂಢಿಯ ಕೂಟ ಸಮನಿಸದು ಕೇಳಾ.

—ಮುಕ್ತಾಯಕ್ಕ



## ಧರ್ಮದ ಬಗೆಗೆ ಹೇಳಿಕೆ

ಶ್ರೀ ಕರ್ಕಿ ಸುಬ್ರಾಯಭಟ್ಟ, ಶಿಕ್ಷಕರು, ಹಿಂದೂ ಹೈಸ್ಕೂಲ್, ಕಾರವಾರ, ಉ.ಕ.

ಅನಾದಿಕಾಲದಿಂದ ಜ್ಞಾನವಿಶಾರದರು, ತತ್ತ್ವಜ್ಞಾನಿಗಳು "ಧರ್ಮ" ಎನ್ನುವ ಪದಕ್ಕೆ ಅರ್ಥ ವಿವರಣೆ ಕೊಡಲು ಪ್ರಯತ್ನ ನಡೆಸಿದ್ದರೂ ಆ ಪದಕ್ಕೆ ನಿಖರವಾದ ಸಂಪೂರ್ಣ ಅರ್ಥ ನೀಡಲು ಸಾಧ್ಯವಾಗಿಲ್ಲ. "ಧರ್ಮ"ವು ಅತಿ ಗಹನವಾದ ಹಾಗೂ ಸೂಕ್ಷ್ಮವಾದ ಹಾಗೂ ಸುಲಭವಾಗಿ ವಿವರಿಸಲು ಅಸಾಧ್ಯವಾದಂತಹದು.

"ಧರ್ಮ" ಎನ್ನುವಪದ ಜನಸಾಮಾನ್ಯರ ಜೀವನದಲ್ಲಿ ಸಹಜವಾಗಿ ಬಳಸಲ್ಪಡುವ ಶಬ್ದ. "ಧರ್ಮೋರಕ್ಷತಿ ರಕ್ಷಿತಃ" ಎನ್ನುವ ನುಡಿ ನಮ್ಮ ಪೂರ್ವಜರದು ಅಂದರೆ "ನಾವು ಧರ್ಮವನ್ನು ಕಾಪಾಡಿದರೆ ಧರ್ಮ ನಮ್ಮನ್ನು ಕಾಪಾಡುತ್ತದೆ" ಎಂದು 'ಧೃ' ಎನ್ನುವ ಸಂಸ್ಕೃತ ಪದದಿಂದ ಜನಿಸಿದ ಧರ್ಮ ಪದದ ಅರ್ಥ "ಎತ್ತಿ ಹಿಡಿದಿರುವುದು" ಎಂದರ್ಥ. "ಧರ್ಮ"ದ ಹರಹು ಎಲ್ಲಡೆ ಇದೆ ಅಡು ಮುಟ್ಟದ ಗಿಡವಿಲ್ಲ ಧರ್ಮ ಹರಡದ ಕ್ಷೇತ್ರವಿಲ್ಲ ಎನ್ನಬಹುದು ಧರ್ಮದ ಅರ್ಥವನ್ನು ಹಲವರು ತಮ್ಮದೇ ರೀತಿಯಲ್ಲಿ ವಿವರಿಸಿದ್ದಾರೆ.

"ಒಂದು ಜನಾಂಗ ಸಾಂಪ್ರದಾಯಿಕವಾಗಿ ಅನುಸರಿಸಿಕೊಂಡು ಬಂದಿರುವ ಆಚಾರ, ಪದ್ಧತಿ ಮತ್ತು ನಿಯಮಗಳಿಗೆ ಧರ್ಮ" ಎಂದು ಹೆಸರು.

"ಯಾವುದು ಒಂದು ಜೀವಿಗೆ ಧಾರಣ ಶಕ್ತಿಯನ್ನು ಯೋಗ್ಯ ರೀತಿಯಲ್ಲಿ ಬಾಳುವ ಶಕ್ತಿಯನ್ನು ಕೊಡುವದೋ ಅದೇ ಧರ್ಮ.

"ಆಚಾರ ಅಕ್ಕಿಯಮೇಲಿರುವ ಹೊಟ್ಟಿನಂತೆ ನಾವು ಊಟ ಮಾಡುವಾಗ ಹೊಟ್ಟನ್ನು ತೆಗೆದು ಅಕ್ಕಿಯನ್ನು ಬೇಯಿಸಿ ತಿಂದರೂ, ನಾವು ಬಿತ್ತಬೇಕಾದರೆ ಬರೀ ಅಕ್ಕಿಯನ್ನು ಬಿತ್ತಿದರೆ ಬೆಳೆ ದೊರಕದು ಮುಂದೆ ಅದನ್ನು ಬೆಳೆಯ ಬೇಕಾದರೆ ಮುಂದಿನವರಿಗೆ ಅದನ್ನು ಕೂಡಿಡಬೇಕಾದರೆ ಅಕ್ಕಿಗಿಂತ ಬತ್ತ ಶ್ರೇಷ್ಠ". ಶ್ರೀ ರಾಮಕೃಷ್ಣ ಪರಮಹಂಸರು ಆಚಾರಕ್ಕೆ ಧರ್ಮದಲ್ಲಿ ವಿಶೇಷಸ್ಥಾನ ಎಂದು ಧರ್ಮದ ಆಚಾರದ ಮಹತ್ವ ಹೇಳಿದ್ದಾರೆ.

"ಮೋಕ್ಷ ಬಯಸುವವನಿಗೆ ಧರ್ಮವೇ ಪ್ರತಿಷ್ಠಾನ"

ಧರ್ಮದಿಂದ ವಿಮುಖನಾದವನು ಬಲವಂತನಾದರೂ ಅಶಕ್ತ, ಹಣವಂತನಾದರೂ ಬಡವ ತಿಳಿದವನಾದರೂ ಮೂರ್ಖ "ಆರ್ಯೋಕ್ತಿ."

"ಧರ್ಮ ಕೊಂದವನನ್ನು ಕೊಲ್ಲುತ್ತದೆ. ಕಾಪಾಡಿದವನನ್ನು ಕಾಪಾಡುತ್ತದೆ. ಧರ್ಮವಿಲ್ಲದೆ ಸುಖವಿಲ್ಲ. ಆದ್ದರಿಂದ ಮಾನವ ಧರ್ಮಪರನಾಗಿರಬೇಕು" –ಸ್ಮೃತಿ

"ತಂದೆ, ಹೆಂಡತಿ, ಸ್ನೇಹಿತರು, ಮಕ್ಕಳು ಯಾರೂ ಅಲ್ಲಿ ಸಹಾಯಕ್ಕೆ ನಿಲ್ಲುವುದಿಲ್ಲ ಧರ್ಮವೊಂದೇ ನಿಲ್ಲುವದು. ಕಲ್ಲು ಮಣ್ಣುಗಳಿಗೆ ಸಮಾನವಾಗಿ ಬಿದ್ದ ಮೃತ ಶರೀರವನ್ನು ಬಿಟ್ಟು ಬಂಧುಬಾಂಧವರು ಮುಖ ತಿರುಗಿಸಿಕೊಂಡು ಹೋಗುವರು. ಧರ್ಮ ಮಾತ್ರ ಆತನನ್ನು ಹಿಂಬಾಲಿಸುವದು. ಆದುದರಿಂದ ತನ್ನ ಸಹಾಯಕ್ಕಾಗಿ ವ್ಯಕ್ತಿ ಸದಾ ಧರ್ಮವನ್ನು ಆಶ್ರಯಿಸಬೇಕು. ದಾಟಲಸದಳವಾದ ಕತ್ತಲೆಯನ್ನು ದಾಟುವದು ಧರ್ಮದ ಸಹಾಯದಿಂದಲೇ ಸಾಧ್ಯ. "ಮನು"

ಪುರುಷನು ಧರ್ಮವನ್ನು ಕೇಳಲಿ, ಕಾಣಲಿ, ಆಡಲಿ, ಮಾಡಲಿ ಅಥವಾ ಅನುಮೋದಿಸಲಿ ಅದು ಅವನನ್ನು ಸದಾ ಪವಿತ್ರ ಮಾಡುತ್ತದೆ. "ಮಹಾಭಾರತ"

ಉತ್ತಮವಾದ ಧರ್ಮವನ್ನು ಕಾಣದೆ ನೂರು ವರ್ಷ ಬದುಕುವದಕ್ಕಿಂತ ಉತ್ತಮವಾದ ಧರ್ಮವನ್ನು ಕಂಡು ಒಂದು ಹಗಲು ಬದುಕುವದು ಮೇಲು.

ಭಗವಾನ್ ಬುದ್ಧ,

## ವಾತ್ಸಲ್ಯ ಶ್ರೀ ಗುರುವೇ

ಶ್ರೀ ಸೆ.ರಾ. ಶೇಷಾಚಲಂ ಎಸ್.ಐ.ಟಿ. ಕಾರ್ಯಾಲಯ, ತುಮಕೂರು.

ಮೃದು ಮಧುರ ನಿಮ್ಮ ನುಡಿ
ದೃಢ ಸದೃಢ ನಿಮ್ಮ ನಡೆ!
ಪ್ರೌಢ ನೊಲಿಮೆ ಪಡೆದಿರುವ
ಶ್ರೀ ಶಿವಕುಮಾರ ಗುರುವೇ ||
ಶುಭ್ರ ನಿಮ್ಮಯ ಮನವು
ರುದ್ರ ಭೂಷಣ ನೊಸಲು |
ಭದ್ರ ನಿಮ್ಮಯ ತಪವು
ಶ್ರೀ ಶಿವಕುಮಾರ ಘನ ನಿಧಿಯೇ ||
ಆಸೆ ಕಳಚಿ ಕಾವಿ ಧರಿಸಿ
ಗುರುವಿನೊಲುಮೆ ಶಿರದಿ ಧರಿಸಿ |
ಅರಸಿ ಬರುವ ಭಕುತ ಜನಕೆ
ಶ್ರೀ ಶಿವಕುಮಾರ ವಾತ್ಸಲ್ಯ ಸಿರಿಯೇ ||
ಚಿಗುರು ಹೃದಯಗಳ ದಿವ್ಯ ನಿಧಿ
ವಿದ್ಯಾ ಗುರು ತಪೋ ನಿಧಿ|
ಸತ್ ಸಂಪ್ರದಾಯ ಶರಣ ನಿಧಿ
ಶ್ರೀ ಶಿವಕುಮಾರ ದಯಾನಿಧಿ ||

# ಸಂಪೂರ್ಣ ಸಾಕ್ಷರತಾ ಆಂದೋಲನ ಏಕೆ ಮತ್ತು ಹೇಗೆ?

—ಆರ್. ವಿ. ಭಂಡಾರಿ ಕೆರೆಕೋಣ ಅರೆಅಂಗಡಿ, ಹೊನ್ನಾವರ ತಾ||, ಉ. ಕ. ಜಿಲ್ಲೆ.

ಸಾಕ್ಷರತೆ ಪ್ರಜಾಪ್ರಭುತ್ವದ ಉಳಿವಿಗೆ ಮತು ಬೆಳವಣಿಗೆಗೆ ಅತ್ಯವಶ್ಯವಾದ ಒಂದು ಅಂಗ. ಅಕ್ಷರವೆಂದರೆ ಅದು ಕೇವಲ ಅಕ್ಷರವಲ್ಲ. ಅಕ್ಷರದ ಒಡಲು ಅರಿವಿನ ಮಡಿಲು. ವಿಜ್ಞಾನಿ ಗೆಲಿಲಿಯೊ ತನ್ನ ದೂರದರ್ಶಕದ ಮೂಲಕ ಇಡೀ ಆಕಾಶವನ್ನೇ ನೋಡುವ ಹಾಗೆ ಅಕ್ಷರದ ಮೂಲಕ ಬದುಕಿನ ಆಗು ಹೋಗುಗಳನ್ನು ಅರಿಯಲಾಗುತ್ತದೆ. ಆದ್ದರಿಂದ ಅಕ್ಷರ ಎನ್ನುವುದು ಬೆಳಕಿನ ಬೀಜ.

1965ರಲ್ಲಿ ಟೆಹರಾನಿನಲ್ಲಿ ಜಗತ್ತಿನ 83 ರಾಷ್ಟ್ರಗಳು ಕೂಡಿದವು. ಪ್ರಜಾಪ್ರಭುತ್ವದ ಪ್ರಗತಿಗೂ ರಾಷ್ಟ್ರಗಳ ಸಂಪತ್ತಿನ ಬೆಳವಣಿಗೆಗೂ ಸಾಕ್ಷರತೆಯ ಹೆಚ್ಚಿನ ಪ್ರಮಾಣಕ್ಕೂ ಇರುವ ಸಂಬಂಧದ ಕುರಿತು ಚರ್ಚಿಸಿದೆವು, 1967ರಲ್ಲಿ ಜಗತ್ತಿನ 13 ರಾಷ್ಟ್ರಗಳು ಸಾಕ್ಷರತಾ ಆಂದೋಲನದ ಕಾರ್ಯಕ್ರಮಕ್ಕೆ ತೊಡಗಿದವು. ಅವುಗಳಲ್ಲಿ ಭಾರತವೂ ಒಂದು.

ಸರಕಾರ ನಡೆಸುವ ಕಾರ್ಯಕ್ರಮಗಳು ಕೆಲವು ಕೆಲವೊಂದು ವರ್ಗಕ್ಕೆಮಾತ್ರ ಸಂಬಂಧವಿರುತ್ತದೆ. ಮಾಸಲಾತಿ, ಸಬ್‌ಸಿಡಿ, ಆಯ್.ಆರ್.ಡಿ.ಪಿ. ಇತ್ಯಾದಿ, ಆದರೆ ಸಾಕ್ಷರತಾ ಆಂದೋಲನ ಮಾತ್ರ ಎಲ್ಲಾ ವರ್ಗಗಳಿಗೂ, ಎಲ್ಲಾ ಧರ್ಮ-ಜಾತಿಗಳಿಗೂ ಸಲ್ಲುವ ಕಾರ್ಯಕ್ರಮ.

ನಮಗೇನು, ನಾವು ಕಲಿತಿದ್ದೇವೆ, ಆ ಕೊಳಚೆಯವರು, ಹಳ್ಳಿಯವರು, ದಲಿತರು, ಬಡವರು ಕಲಿಯದಿದ್ದರೆ ನಮಗೇನು ಎಂದು ಅಂದುಕೊಂಡು ನಿಷ್ಕ್ರಿಯರಾದರೆ ನಮ್ಮ ಕಾಲಮೇಲೆ ನಾವೇ ಕಲ್ಲು ಹೊಯ್ದುಕೊಂಡಂತೆ. ಯಾಕೆಂದರೆ ಪ್ರಜಾಪ್ರಭುತ್ವದಲ್ಲಿ ರಾಜಕೀಯ ನಿರ್ಣಯಿತರು ಈ ಸಾಮಾನ್ಯ ಮತದಾರರೂ ಹೌದು. ಮೂರ್ಖರು ಮತದಾರರಾದರೆ ಮೂರ್ಖ ಪ್ರತಿನಿಧಿಗಳೇ ಆರಿಸಿ ಬರುತ್ತಾರೆ ಮತ್ತು ಅಂಥ ಮೂರ್ಖರಿಂದಲೇ ಎಲ್ಲರೂ ಆಳಲ್ಪಡುತ್ತಾರೆ. ಹಾಗಾಗದೆ ಒಳ್ಳೆಯ ಕಾಯ್ದೆ ಒಳ್ಳೆಯ ಸರಕಾರದಿಂದ ಆಳಲ್ಪಡಬೇಕೆಂದರೆ ಒಳ್ಳೆಯ ಪ್ರತಿನಿಧಿಗಳನ್ನು ಆರಿಸುವಂತೆ ಮತದಾರರ ಮಟ್ಟವನ್ನು ಎತ್ತರಿಸಬೇಕು. ಹಾಗೆ ಮಾಡುವುದು ಎಂದರೆ ಸಕಲರಿಗೂ ಶಿಕ್ಷಣ ನೀಡುವುದೇ ಆಗಿದೆ. ಆದ್ದರಿಂದ ಅಕ್ಷರ ವಂಚಿತರಾದ ನಮ್ಮ ಜನರನ್ನು ಸಾಕ್ಷರರನ್ನಾಗಿ ಮಾಡುವುದೆಂದರೆ ನಮ್ಮ ಉಪಕಾರವನ್ನೇ ನಾವೇ ಮಾಡಿಕೊಂಡಂತೆ. ಸಾಕ್ಷರತೆ ಹೆಚ್ಚಾಗಿರುವಲ್ಲಿ ವೈಜ್ಞಾನಿಕತೆ, ಹೆಚ್ಚು ಪ್ರಗತಿ ಶೀಲತೆ ಮತ್ತು ಆರ್ಥಿಕ ಪ್ರಗತಿಯೂ ತೀವ್ರಗೊಳ್ಳುತ್ತದೆ.

ಸಾಕ್ಷರತೆ ಎಂದರೆ ಕೇವಲ ಸಹಿ ಹಾಕವುದಲ್ಲ. ಅಕ್ಷರದ ಮುಖಾಂತರ ಅರಿವನ್ನು ಹೆಚ್ಚಿಸಬೇಕು. ಚುನಾವಣೆಯು ಮಹತ್ವ ಕುಟುಂಬ ಯೋಜನೆ, ಮೂಢ ನಂಬಿಕೆಗಳು, ಪರಿಸರ ಸಂರಕ್ಷಣೆ, ಆರೋಗ್ಯ ಆಹಾರ, ಅನೇಕ ಭಾಷೆ, ಧರ್ಮಗಳ ಮಧ್ಯೆಯೆ ಸಾಮರಸ್ಯ ಇವುಗಳೆಲ್ಲದರ ಬಗೆಗೆ ಹೆಚ್ಚಿನ ತಿಳಿವಳಿಕೆಯನ್ನು ಕೊಡಬೇಕು.

"ಭೂಮಿಯ ಮೇಲೆ ಶಾಶ್ವತ ಶಾಂತಿಯ ಪ್ರತಿಷ್ಠಾಪನೆಗಗಾಗಿ ನಮಗೆ ಇರುವುದು ಒಂದೇ ಅವಕಾಶ! ಶ್ರೀಸಾಮಾನ್ಯನ ಶಿಕ್ಷಣ ಶಕ್ತಿಯ ಬಿಡುಗಡೆ ಎಂದು ಸಾಕ್ಷರತೆಗಾಗಿ ಚೀನ, ಫಿಲಿಪೈನ್ ಮೊದಲಾದಕಡೆ ಅಹರ್ನಿಶಿ ದುಡಿದ ವ್ಯಕ್ತಿ ಜಿಮ್ಮಿಯೆನ್ ಹೇಳುತ್ತಾನೆ.

ನಮ್ಮಲ್ಲಿ ಸುಮಾರು ಪ್ರತಿಶತ 47 ಜನ ನಿರಕ್ಷರಿಗಳಾಗಿದ್ದಾರೆ. ಅದರಲ್ಲೂ ಮಹಿಳೆಯರ ಸಂಖ್ಯೆ ಅತ್ಯಧಿಕ. ಹಳ್ಳಿಗಳಲ್ಲಿ ಮಹಿಳೆಯರ ಅನಕ್ಷರತೆ ನೂರಕ್ಕೆ 88. ಸರಾಸರಿ ಪ್ರತಿ ಒಬ್ಬ ಪುರುಷರಿಗೆ ಎರಡು ಮಹಿಳಾ ಸಂಖ್ಯೆ ಅನಕ್ಷರತೆ ಉಳ್ಳವರು ನಮ್ಮ ಅನಕ್ಷರತೆ ಜಗತ್ತಿನ ಅನಕ್ಷರತೆಯ ಶೇಕಡ 50 ರಷ್ಟು.

ಅಕ್ಷರದಿಂದ ಅರಿವು, ಅರಿವಿನಿಂದ ಹೋರಾಟ, ಹೋರಾಟದಿಂದ ವಿಮೋಚನೆ ಎಂಬ ಮಾತುಂಟು. ಕ್ರಿಯಾತ್ಮಕ ಸಾಕ್ಷರತೆ ಇಂಥ ಅರಿವನ್ನು ಹುಟ್ಟಿಸಲು ಸಾಧ್ಯ ಹಾಗಾಗಬೇಕು ಎಂಬುದು ಇವೆಲ್ಲದರ ಆಶಯ.

ರಾಷ್ಟ್ರೀಯ ವಯಸ್ಕರ ಶಿಕ್ಷಣ 1978ರಲ್ಲಿ ಜಾರಿಗೆ ಬಂತು. 1936ರಲ್ಲಿ ಸಾಮೂಹಿಕ ಕ್ರಿಯಾತ್ಮಕ-ಸಾಕ್ಷರತಾ ಕಾರ್ಯಕ್ರಮ ಬಂತು. ರಾಷ್ಟ್ರೀಯ ಸಾಕ್ಷರತಾ ಮಿಶನ್ 1986ರಲ್ಲಿ ಸ್ಥಾಪಿತವಾಯಿತು. ಇವೆಲ್ಲ ಕೆಲವು ಮಿತಿಗಳಿಂದ ಕೂಡಿದವು. 1990ರಲ್ಲಿ ಸಂಪೂರ್ಣ ಸಾಕ್ಷರತಾ ಆಂದೋಲನ ಕೈಗೆತ್ತಿಕೊಳ್ಳಲಾಗಿದೆ. ಈಗಿನ ಸಾಕ್ಷರತಾ ಆಂದೋಲನ ಇದೇ ಆಗಿದೆ.

ಈಗಿನ ಆಂದೋಲನವನ್ನು ಸಂಪೂರ್ಣವಾಗಿ ಜನಾಂದೋಲನವನ್ನಾಗಿ ಮಾಡುವ ಉದ್ದೇಶವನ್ನು ಹೊಂದಲಾಗಿದೆ. ಆಂದೋಲನವೆಂದರೆ ಹೆಚ್ಚು ಜನರು, ಹೆಚ್ಚು ಶಕ್ತಿಹಾಕಿ, ಕಡಿಮೆ ವೇಳೆಯಲ್ಲಿ ಅತಿಹೆಚ್ಚು ಫಲವನ್ನು ಪಡೆಯುವುದೇ ಆಗಿದೆ. ಆದ್ದರಿಂದ ಈ ಯೋಜನೆಯನ್ನು ಮುನ್ನೆಡೆಸಬೇಕಾದವರು ಜನರೇ ಆಗಿದ್ದಾರೆ.

ಇದರಲ್ಲಿ ಮೂರು ಅಂಗ ಉಂಟು. ಸರಕಾರ ಅದರ ಎಲ್ಲ ಸಿಬ್ಬಂದಿಗಳ ಸಹಾಯ ದಿಂದ ಕಲಿಕೆಯ ಅನುಕೂಲಕ್ಕೆ ಬೇಕಾದ ವ್ಯವಸ್ಥೆ ಮತ್ತು ಧನ ಸಹಾಯ ನೀಡಬೇಕು. ಉದಾಹರಣೆಗೆ ಕಲಿಯುವ ಪರಿಸರ ನಿರ್ಮಾಣಕ್ಕಾಗಿ ನಡೆಸುವ ಕಲಾಜಾಥಾ, ಗೋಡೆ ಬರಹ, ಫಲಕ ಬರಹ ಸಭೆಗಳು ಇತ್ಯಾದಿಗಳ ಖರ್ಚು, ಪಠ್ಯಪುಸ್ತಕ, ಪಾಟಿ, ಮತ್ತಿತರ ಸಲಕರಣೆಯ ಖರ್ಚು ಮೌಲ್ಯಮಾಪನ ಇತ್ಯಾದಿಗಳ ಖರ್ಚನ್ನು ಸರಕಾರ ಸಹಿಸುವು ದಲ್ಲದೆ ತನ್ನ ಸಿಬ್ಬಂದಿಗಳನ್ನು ಇದರಲ್ಲಿ ತೊಡಗಿಸುವುದು. ಎರಡು ಜನಸಮಿತಿ. ಈ



ಸಮಿತಿ ಪ್ರತಿ ಹಳ್ಳಿಗಳಲ್ಲಿ ನಿರ್ಮಾಣವಾಗಿರುತ್ತದೆ. ಊರಿನ ಹಿರಿಯರು, ಅಧಿಕಾರಿಗಳು ಶಿಕ್ಷಣವೇತ್ತರು, ಯುವಕ ಯುವತಿ ಮಂಡಲದ ಸದಸ್ಯರೆಲ್ಲ ಇರುತ್ತಾರೆ. ಇವರೇ ಆ ಆಂದೋಲನದ ಮುಖ್ಯಸ್ಥರು. ಈ ಜನರು ಈ ಕಾರ್ಯಕ್ರಮ ತಮ್ಮದೆಂದು ತಿಳಿದರೆ ಮಾತ್ರ ಆಂದೋಲನ ಯಶಸ್ವಿಯಾಗುತ್ತದೆ. ಪದೇ ಪದೇ ಸಭೆ ಸೇರುವುದು. ಅಕ್ಷರಾರ್ಥಿಗಳ ಹಾಜರಿ ಸರಿ ಇರುವಂತೆ ನೋಡುವುದು, ಕಲಿಕಾ ಕೇಂದ್ರಕ್ಕೆ ಅಗತ್ಯವಾದ ಸಲಕರಣೆ ಸಹಾಯ ಒದಗಿಸುದು ಇದರ ಕೆಲಸ. ಈ ಸಮಿತಿ ಜೀವಂತವಾಗಿದ್ದಲ್ಲೆಲ್ಲ ಸಾಕ್ಷರತಾ ಆಂದೋಲನ ಯಶಸ್ವಿಯಾಗುತ್ತದೆ. ಮೂರು, ಕಲಿಸುವ ಸ್ವಯಂಸೇವಕರು. ಇದು ಮಹತ್ವದ ಭಾಗ. ಈ ಸ್ವಯಂಸೇವಕರಿಗೆ ಗೌರವಧನ ಇಲ್ಲ. ಇವರಿಗೆ ಹೊಸಪದ್ಧತಿಯಲ್ಲಿ ಕಲಿಸುವಿಕೆಯ ಬಗ್ಗೆ ತರಬೇತಿ ಕೊಡಲಾಗುತ್ತದೆ. ಈ ಯುವಕ ಯುವತಿಯರು ಸುಮಾರು ಆರುತಿಂಗಳ ಕಾಲ ತಮಗೆ ನಿಗದಿತವಾದ 10 ಅಕ್ಷರಾರ್ಥಿಗಳಿಗೆ ಕಲಿಸಬೇಕಾಗುತ್ತದೆ.

ಇದನ್ನು ಅವರು ಸೇವಾ ಭಾವನೆಯಿಂದಲೇ ಮಾಡಬೇಕಾಗುತ್ತದೆ. ಹಣಕ್ಕೆ ಮಾಡಿದ್ದು ಸೇವೆಯಲ್ಲ. ಇವರನ್ನು ಎಲ್ಲಾ ಮಟ್ಟದ ಜನರೂ ಗೌರವದಿಂದ ಕಾಣಬೇಕು. ನಮ್ಮ ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಎಷ್ಟೊಂದು ಜನ ಬಲಿಯಾಗಿದ್ದಾರೆ, ಅವರ ಶ್ರಮದ ಫಲವಾಗೇ ನಾವು ಇಂದು ಸ್ವಾತಂತ್ರ್ಯ ಅನುಭೋಗಿಸುತ್ತೇವೆ. ನಮ್ಮಸುತ್ತಲೇ ಬಿಸಿಲು ಬೇಗೆ ಎನ್ನದೇ ದುಡಿಯುವ ಬಡ ಜನರು ಕೊಡುವ ಟ್ಯಾಕ್ಸ್‌ದ ಮೇಲೆ ನಮ್ಮ ಶಿಕ್ಷಣ, ಶಾಲೆ, ಕಾಲೇಜು ನಡೆಯುತ್ತಿದೆ. ಆದರೆ ಅವರು ದೀನರಾಗಿ, ಕಷ್ಟಕೋಟಿಲೆಯಲ್ಲೇ ಇದ್ದರೆ ಅಂಥವರ ಸಾಮಾಜಿಕಋಣ ಕಲಿತವರ ಉದ್ಯೋಗವಂತರ, ಯುವಕ ಯುವತಿಯರ ಮೇಲಿದೆ. ಆ ಋಣದ ಕೆಲವು ಭಾಗವನ್ನು ನಾವು ಅವರಿಗೆ ಕಲಿಸುವುದರ ಮೂಲಕ ತೀರಿಸಬೇಕು. ಇದೊಂದು ಎರಡನೇ ಸ್ವಾತಂತ್ರ್ಯ ಆಂದೋಲನ. ಇದರಲ್ಲಿ ಭಾಗವಹಿಸುವ ಒಂದು ಅವಕಾಶ ತಮ್ಮದು ಎಂದು ನಮ್ಮ ಯುವಕ-ಯುವತಿಯರು ಬಗೆಯಬೇಕು. ಇಂಥ ಮನೋಭಾವ, ತ್ಯಾಗ ಅತಿದೊಡ್ಡದು, ಗೌರವಾರ್ಹವಾದುದು.

ಹೀಗೆ ಈ ಮೂರೂ ಅಂಗಗಳ ಸಮನ್ವಯ ಕಾರ್ಯದಿಂದ ಸಂಪೂರ್ಣ ಸಾಕ್ಷರತಾ ಆಂದೋಲನ ಯಶಸ್ವಿಯಾಗಬೇಕಾಗುತ್ತದೆ.

ಅಂತೆಯೇ ಈ ಆಂದೋಲನಕ್ಕೆ ಬುದ್ಧಿ ಜೀವಿಗಳು, ಕಲಿತವರು, ಮುಂದಾಳುಗಳು ಶಿಕ್ಷಕರು, ಪ್ರಾಧ್ಯಾಪಕರು, ವ್ಯಾಪಾರಿಗಳು, ಕಲಾವಿದರು, ಕವಿಗಳು, ಆತ್ಮೀಯವಾಗಿ ಸ್ಪಂದಿಸಬೇಕು. ಯುವಕ, ಯುವತಿಯರನ್ನು ಈ ಕಾರ್ಯದಲ್ಲಿ ತೊಡಗಿಸುವಂತೆ ಮಾಡಬೇಕು. ಉಸ್ತುವಾರಿಯ ಮುಂಚೂಣಿಯಲ್ಲಿರುವ ಅಧಿಕಾರಿಗಳಿಗೆ ಸಹಾಯಕರಾಗಿ ನಿಲ್ಲಬೇಕು. ಆಗಲೇ ಈ ಕಾರ್ಯಕ್ರಮ ಯಶಸ್ವಿಯಾಗುತ್ತದೆ.

ದಲಿತರ ಮನೆ ಮನೆಗೆ ಹೋಗಿ ಶಿಕ್ಷಣ ಕೊಡಿ ಎಂದು ಸ್ವಾಮಿ ವಿವೇಕಾನಂದರು ಕಲಿಯದವರಿಗೆ ಕಲಿಯಿರಿ ಕಲಿತವರಿಗೆ ಕಲಿಸಿರಿ ಎಂದು ಡಾ॥ ಬಿ.ಆರ್. ಅಂಬೇಡ್ಕರರು ಅನಕ್ಷರತೆ ಒಂದು ಪಾಪ ಎಂದು ಮಹಾತ್ಮಾಗಾಂಧೀಜಿಯವರೂ ಅಂದಿದ್ದಾರೆ.

# ಯೂಕೀ ಮಾತ್ಸುರೀಃ ಬರ್ಫದ ಹಬ್ಬ

–ಪ. ರಾಮಕೃಷ್ಣ ಶಾಸ್ತ್ರಿ, ಶಿವಶಕ್ತಿ ನಿಲಯ, ಮಚ್ಚಿನ, ದ ಕ. 574295

ಜಗತ್ತಿನಲ್ಲೆ ವಿಶಿಷ್ಟವಾದ ಬರ್ಫದ ಹಬ್ಬವೊಂದು ನಡೆಯುತ್ತಿದೆ ಅಂದರೆ ವಿಚಿತ್ರ ಅನಿಸೀತು. ಆದರೂ ಇದು ನಿಜ ಎಂದು ತಿಳಿಯಬೇಕಿದ್ದರೆ ಜಪಾನಿನ ಮಹಾನಗರಗಳಲ್ಲಿ ಆರನೆಯದು ಎನಿಸಿರುವ ಸಪೋರೋಗೆ ಹೋದರೆ ಆಗಬಹುದು ಸದಾ ಕಾಲ ತಂಪಾದ ಹವೆಯಿರುವ ಈ ನಗರ ಪ್ರಾಕೃತಿಕವಾದ ರಮ್ಯ ದೃಶ್ಯಗಳಿಗೆ ಹೆಸರಾದುದು. ನಗರದ ಆಕರ್ಷಣೆಗೆ ಮುಖ್ಯಕಾರಣವೆಂದರೆ ಮಂಜುಗಡ್ಡೆ ಅಥವಾ ಬರ್ಫದ ಹಬ್ಬ. ಜಪಾನಿನ ಇನ್ನಿತರ ಪ್ರಮುಖ. ರಾಷ್ಟ್ರೀಯ ಉತ್ಸವಗಳ ಆಕರ್ಷಣೆ, ಮಹತ್ವಗಳನ್ನೂ ಈ ಹಬ್ಬದ ಹಿರಿಮೆ ಹಿಂದೇಟು ಹಾಕಿಸಿದೆ.

ಪ್ರತಿ ವರ್ಷ ಫೆಬ್ರವರಿ ತಿಂಗಳ ಹೊತ್ತಿಗೆ ಸಪೋರೋ ನಗರ ಧಾರಾಳವಾಗಿ ಸುರಿಯುವ ಹಿಮಪಾತದಿಂದಾಗಿ ಮಂಜಿನ ಮುಸುಕು ಹೊದ್ದ ಮಂದಗಮನೆಯಂತಾಗುತ್ತದೆ. ಆ ಕಾಲದಲ್ಲೇ ನಗರದ ಔನ್ ಡಾನ್ ಟೌನ್ ಮಾಲ್ ಓಡೋರೀ ಪಾರ್ಕ್‌ನಲ್ಲಿ ಬರ್ಫದ ಹಬ್ಬವು ನಡೆಯುವುದು ವಾಡಿಕೆ. ಇಡೀ ಪಾರ್ಕಿನಲ್ಲಿ ಎಲ್ಲಿ ನೋಡಿದರೂ ಮಂಜುಗಡ್ಡೆಯ ದೃಶ್ಯವೇ ರಾರಾಜಿಸುವ ಹಾಗೆ ಕಾಣಿಸಲು ಸಾಕಷ್ಟು ಪೂರ್ವಸಿದ್ಧತೆಗಳನ್ನು ನಡೆಸಲಾಗುವುದು. ಹಿಮಗಡ್ಡೆಯಿಂದ ನಾನಾ ಆಕೃತಿಗಳ ಮಾದರಿಗಳನ್ನು ತಯಾರಿಸಲಾಗುವುದು. ಒಂದೆಡೆ ಆನೆಗಳು, ಹುಲಿಗಳು, ಮತ್ತೊಂದಡೆ ಹಾವುಗಳು, ಬೇರೊಂದೆಡೆ ರಾಜಭವನಗಳು, ಸಿರಿವಂತರ ಮಹಲುಗಳು, ಬೇರೆ ಬೇರೆ ದೇಶಗಳ ಪ್ರಸಿದ್ಧ ಕಟ್ಟಡಗಳು, ಎಲ್ಲವೂ ವರ್ಣರಂಜಿತವಾಗಿ ಹೊಸ ಲೋಕಕ್ಕೆ ನಮ್ಮನ್ನು ಕರೆದೊಯ್ಯುತ್ತದೆ.

ಓಡೋರಿ ಪಾರ್ಕಿನ ಮುಖದ್ವಾರದಲ್ಲಿ ಮಂಡಲಾಕೃತಿಯ ಒಂದು ಮಾನವ ವಿಗ್ರಹ ನಮ್ಮ ಸ್ವಾಗತಕ್ಕೆ ಸಿದ್ಧವಾಗಿರುತ್ತದೆ. ಜೀವಂತ ಮನುಷ್ಯನೋ ಎಂದು ಭಾವಿಸುವಷ್ಟು ಸಹಜವಾಗಿ ಕಾಣಿಸುತ್ತಾ ಮುಗುಳ್ನಗುತ್ತಿರುವ ಈ ವಿಗ್ರಹದ ಹೆಸರು 'ಯೂಕೀ ಡಾರೂಮಾ' ಇದು ಈ ಬರ್ಫದ ಹಬ್ಬದ ಹೆಗ್ಗುರುತಿನ ವಿಗ್ರಹ. ಇದನ್ನು ದಾಟದರೆ ಬಣ್ಣ ಬಣ್ಣದ ವಿದ್ಯುದ್ದೀಪಗಳಿಂದ ರಂಜಿತವಾದ ಚಿತ್ತಾಕರ್ಷಕವಾದ ಮಂಜಿನ ವಿಗ್ರಹಗಳ ಮಾಯಾಲೋಕದೊಳಗೆ ಪ್ರವೇಶಿಸುತ್ತೇವೆ. ದೇಶವಿದೇಶಗಳಿಂದ ಲಕ್ಷಾವಧಿ ಪ್ರೇಕ್ಷಕರು ಹಬ್ಬ ನೋಡಲೆಂದೇ ಆಗಮಿಸುತ್ತಾರೆ.

1950 ರಿಂದ ಈ ಬರ್ಫದ ಹಬ್ಬ ಆರಂಭವಾಗಿ ಅನೂಚಾನವಾಗಿ ನಡೆಯುತ್ತ ಬಂದಿದೆ. ಅಂದಿನಿಂದ ಈ ತನಕ ಹಬ್ಬದಲ್ಲಿ ಜಪಾನಿನ ಆತ್ಮರಕ್ಷಾ ಬ್ಯಾಂಡ್ ತಂಡದ ಸದಸ್ಯರು ಹಸಿರು ಉಡುಪು ತೊಟ್ಟು ವಾದ್ಯ ನುಡಿಸುತ್ತಾ ಬಂದಿದ್ದಾರೆ. ಈ ವಾದ್ಯ ವಾದನವೂ ಮೋಹಕವಾದುದು. ಆರಂಭದಲ್ಲಿ ಹಬ್ಬವು ಕೇವಲ ಒಂದು ದಿನ

ನಡೆಯುತ್ತಿತ್ತು. ಆಗ ನಾಯಿಗಳ ಓಟದ ಪಂದ್ಯ, ಸ್ಕೀಯಿಂಗ್, ಸ್ನೋ ಸ್ಕೇಟಿಂಗ್ ಸಂಗೀತ ಸ್ಪರ್ಧೆ ಮತ್ತು ಚಲನಚಿತ್ರ ಪ್ರದರ್ಶನ ಮಾತ್ರ ಇತ್ತು. ಕೇವಲ 10 ಪ್ರತಿಮೆಗಳನ್ನು ಬಹು ಚಿಕ್ಕದಾಗಿ ನಿರ್ಮಿಸಲಾಗುತ್ತಿತ್ತು.

ಈಗ ಹಾಗಲ್ಲ. ಪ್ರತಿಮೆಗಳ ನಿರ್ಮಾಣಕ್ಕೇ ಆದ್ಯಗಮನ ಹರಿಸಲಾಗುತ್ತದೆ. ಶಾಲಾ ವಿದ್ಯಾರ್ಥಿಗಳು ನೂರಾರು ಸಂಖ್ಯೆಯಲ್ಲಿ ಭಾಗವಹಿಸಿ ಪಾರ್ಕಿನ 'ಬ್ಲಾಕ್ ಸ್ಕ್ವಾಯರ್' ಪ್ರದೇಶದಲ್ಲಿ ಬೃಹದಾಕಾರದ ಬರ್ಫದ ಗಟ್ಟಿಗಳನ್ನು ಹೆಸರಾಂತ ಶಿಲ್ಪಿಗಳು, ಸುಂದರ ತರುಣಿಯರು, ಪ್ರಾಣಿಗಳು, ಮರಗಿಡಗಳು, ಖ್ಯಾತ ವ್ಯಕ್ತಿಗಳು, ದೇಗುಲಗಳು, ಪ್ರೇಕ್ಷಣೀಯ ಮಂದಿರಗಳನ್ನಾಗಿ ಕಡೆಯುತ್ತಾರೆ. ಆತ್ಮರಕ್ಷಾ ತಂಡದ ಜವಾನರು ಅವರಿಗಾಗಿ ಲಾರಿಗಳಲ್ಲಿ ಬರ್ಫದ ಗಟ್ಟಿಗಳನ್ನು ತಂದು ರಾಸಿ ಹಾಕುತ್ತಾರೆ. ರಾತ್ರಿ ಹಗಲು ದುಡಿದು ಜಪಾನಿನ ಪರಂಪರಾಗತ ವಾಸ್ತುಕಲೆಯನ್ನಲ್ಲದೆ ಮಕ್ಕಳ ಮನರಂಜಿಸಲು ಖ್ಯಾತನಾಮರ ಶೈಲಿಯಲ್ಲಿ ಕಾರ್ಟೂನು ಶಿಲ್ಪಿಗಳನ್ನು ಸೃಜಿಸ-ಲಾಗುವುದು.

ಈವರೆಗಿನ ಹಬ್ಬಗಳಲ್ಲಿ ಹೆಚ್ಚು ಚಿತ್ತಾಕರ್ಷತವಾದುದು 1982ರ ಸಮಾರಂಭ ಎನ್ನಲಾಗಿದೆ. ಇದರ ವೀಕ್ಷಣೆಗೆ ಜಪಾನಿನ ಎಲ್ಲೆಡೆಯಿಂದ ಒಂದು ಲಕ್ಷ ಜನರೂ ವಿದೇಶಗಳಿಂದ 16ಸಾವಿರ ವೀಕ್ಷಕರೂ ಬಂದು ಶ್ಲಾಘಿಸಿದರಂತೆ. ಹಬ್ಬ 5ದಿನ ನಡೆಯಿತು ಈ ಪಾರ್ಕಿನ 11 ಬ್ಲಾಕ್ ಉದ್ದದ ರಸ್ತೆಯ ಎರಡೂ ಕಡೆಗಳಲ್ಲಿ 198 ನಾನಾ ಆಕಾರ ವೈವಿಧ್ಯಗಳ ವಿಗ್ರಹಗಳನ್ನು ಸಾಲಾಗಿ ಇರಿಸಲಾಗಿತ್ತು **ದಾಜಿಫೂ ತೇನ್ ಮಾಗೂ** ಮಂದಿರದಲ್ಲಿರಿಸಿದ ನಾಯಿಯ ಬೃಹತ್ ವಿಗ್ರಹ ಉತ್ಸವದ ಪ್ರಮುಖ ಆಕರ್ಷಣೆಗಳಲ್ಲೊಂದಾಗಿತ್ತು. ನೂರಾರು ಜನರು, ನೂರಾರು ಗಂಟೆ ಶ್ರಮಿಸಿ ರೂಪಿಸಿದ ನಾಯಿ 13 ಮೀಟರ್ ಉದ್ದ, 9 ಮೀಟರಿನಷ್ಟು ಅಗಲ ಇತ್ತು. ಇದಕ್ಕಾಗಿ 400 ಲಾರಿಗಳಲ್ಲಿ 1400 ಟನ್ ಮಂಜಿನಗಡ್ಡೆ ತರಿಸಲಾಗಿತ್ತು.

ಬರ್ಫದಿಂದ ಕೊರೆದ **ಹೊನಲೂಲೂ ಲೋ ಅನೀ** ಅರಮನೆ ಬರ್ಫದ ಹಬ್ಬದ ಆಕರ್ಷಕ ನಿರ್ಮಾಣಗಳಲ್ಲಿ ಒಂದೆನಿಸಿದೆ. ಅರಮನೆಯಷ್ಟೇ ಗಾತ್ರದ, ಯಾವುದು ಸಹಜ ಯಾವುದು ಕೃತಕ ಎಂಬ ಭೇದವೇ ತಿಳಿಯದಷ್ಟು ನೈಜವಾಗಿದ್ದ ಈ ಅರಮನೆಯ ಮುಂದೆಯೆ ದೊರೆ **ಕಾಮಿಹಾ ಮಿಹಾನ** ದೊಡ್ಡ ವಿಗ್ರಹವನ್ನೂ ನಿಲ್ಲಿಸಲಾಗಿತ್ತು. ಅಮೇರಿಕಾದ ವಾಯುಪಡೆಯ ಜವಾನರಿಂದ ನಿರ್ಮಿತವಾದ **ಹೆಲ್ಸಿಂಕಿಯ ಗ್ರ್ಯಾಂಡ್** ಕೆಥೆಡ್ರಲ್ ಮಾದರಿಯು ಆಕರ್ಷಕವಾದುದು. ಮಂಜುಗಡ್ಡೆಯಿಂದ ನಿರ್ಮಾಣವಾದ ಚೌಕಾಕಾರದ ಅಕ್ವೇರಿಯಂನಲ್ಲಿ ಈಜುತ್ತಿದ್ದ **ಹೊಕಾಯಿಸ್** ದ್ವೀಪದ ವರ್ಣರಂಜಿತ ಮೀನುಗಳನ್ನು ನೋಡಲು ಜನ ಮುನ್ನುಗ್ಗುತ್ತಿದ್ದರು.



1974 ರಿಂದ ಈ ಹಬ್ಬದಲ್ಲಿ ಅಂತಾರಾಷ್ಟ್ರೀಯ ಬರ್ಫ ಪ್ರತಿಮೆಯ ಸಂಘಗಳಿಂದ ಕೋರಸ್ ವ್ಯವಸ್ಥಿತಗೊಳಿಸಿ ಪ್ರೇಕ್ಷಕರ ಮನಸ್ಸಿಗೆ ಮುದ ನೀಡಲಾಗುತ್ತಿದೆ. ಇದರಿಂದ ಅಂತಾರಾಷ್ಟ್ರೀಯ ಸ್ನೇಹ ಸಂಬಂಧವೂ ಹೆಚ್ಚಿದೆಯಂತೆ. ಅಮೇರಿಕ ಸಂಯುಕ್ತ ಸಂಸ್ಥೆಗಳು, ಚೀನ, ಪಶ್ಚಿಮ ಜರ್ಮನಿ, ಮ್ಯೂನಿಕ್, ಶೀನಯಾಂಗ್‌ಗಳಿಂದ ಬಂದ ಜನರು ಈ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಿದ್ದಾರೆ. ವರ್ಷಂಪ್ರತಿ ಇಲ್ಲಿಗೆ ಬರಲು ಹತ್ತು ರಾಷ್ಟ್ರಗಳ ಜನರಿಗೆ ಮಾತ್ರ ಆಮಂತ್ರಣ ನೀಡಲಾಗುತ್ತದೆ.

ಮಂಜುಗಡ್ಡೆಯ ರಾಸಿ ಕಂಡು ಅರಿಯದ ಜನರಿಗೆ ಜಪಾನಿನ ಈ ಹಬ್ಬ ನೀಡುವ ಆನಂದದ ಅನುಭವ ವರ್ಣಿಸಲದಳವಾದುದು. ಇದರಿಂದ ಆದ ಇನ್ನೊಂದು ಲಾಭವೆಂದರೆ ಅಂತಾರಾಷ್ಟ್ರೀಯ ವಿವಾಹ ಸಂಬಂಧ. ಬೇರೆ ಬೇರೆ ರಾಷ್ಟ್ರಗಳಿಂದ ಬಂದ ತರುಣ ತರುಣಿಯರು ಬರ್ಫದ ಹಬ್ಬದ ನಡುವೆ ಪರಿಚಿತರಾಗಿ, ಅವರಲ್ಲಿ ಉಂಟಾದ ಅನುರಾಗ ವಿವಾಹದ ವರೆಗೆ ತಲುಪುತ್ತಿದೆ. ಬರ್ಫದ ಹಬ್ಬದಿಂದಾಗಿ ವಿದೇಶಗಳಲ್ಲಿ ತನ್ನ ಪ್ರತಿಷ್ಠೆ ಅಧಿಕವಾಗುತ್ತಿದೆ ಎಂದು ಒಪ್ಪಿಕೊಳ್ಳುವ ಜಪಾನಿನ ಪ್ರವಾಸೋದ್ಯಮ ಇಲಾಖೆಗೆ 1982 ರಲ್ಲಿ ಈ ಸಂದರ್ಭ 3 ಕೋಟಿ 80 ಲಕ್ಷ ಅಮೇರಿಕನ್ ಡಾಲರುಗಳ ಆದಾಯವೂ ಲಭಿಸಿದೆ. **ಯೂಕೀ ಮಾತ್ಸುರೀ** ಎಂದು ಕರೆಯಲ್ಪಡುವ ಬರ್ಫದ ಹಬ್ಬದ ಆಕರ್ಷಣೆ ದಿನೇ ದಿನೇ ಹೆಚ್ಚುತ್ತಿದೆ.

---

# ಕಾರಣಪುರಷ ಬಸವೇಶ್ವರ ಭಾಗ-3.

ಡಾ॥ ಎಲ್. ಅರ್- ಹೆಗಡೆ, ಸಿದ್ದಾಪುರ, ಉತ್ತರಕನ್ನಡ-ಜಿಲ್ಲೆ- 581 355.

**ತೆಲುಗು ಗ್ರಂಥಗಳು :** ಬಸವಕಲ್ಯಾಣವು ಕನ್ನಡ ಹಾಗು ತೆಲುಗು ಪ್ರಾಂತ್ಯಗಳ
ಮೇರೆಯಲ್ಲಿರುವುದರಿಂದ ಪ್ರಚಾರ ಹಾಗು ಪ್ರಸಾರವು ಬೇಗನೆ ತೆಲುಗುನಾಡಿನಲ್ಲಾಯಿತು.
ತೆಲುಗಿನ ಶ್ರೇಷ್ಠಕವಿಗಳಲ್ಲಿ ಒಬ್ಬನಾದ ಪಾಲ್ಕುರಿಕೆ ಸೋಮನಾಥನು ( ಕಿ. ಶ.
೧೨೪೦-೧೭೨೦) ಪಾಂಡಿತ್ಯ ಕವಿತ್ವಗಳಿಂದ ಮೇರುಶೃಂಗದಂತಹ ಮಹೋನ್ನತ
ಸ್ಥಾನವನ್ನು ಪಡೆದಿದ್ದನು ಎಂದು ಶ್ರೀ ಗಾಜುಲ ವೀರಯ್ಯನವರ "ವಂದನೆ" ಎಂಬ
ಗ್ರಂಥದಲ್ಲಿ ಬರೆದಿದ್ದಾರೆ. ಸೋಮನಾಥನು ದ್ವಿಪದಿ ಛಂದಸ್ಸಿನಲ್ಲಿ "ಬಸವಚಾರಿತ್ರ"
ವನ್ನು ಬರೆದವನು. ಈ ಬಸವಚಾರಿತ್ರವು ಬಸವಣ್ಣನನ್ನು ಕುರಿತು ಸಮಗ್ರವಾಗಿ
ಲಭಿಸಿದ ಪ್ರಥಮ ಶ್ರೇಷ್ಠಕಾವ್ಯ. ಪುರಾಣದ ಮಾದರಿಯ ಪ್ರಥಮಕಾವ್ಯ, ಇದು
ಭೀಮಕವಿಯ ಕನ್ನಡ ಬಸವಪುರಾಣಕ್ಕೆ ಮೂಲಗ್ರಂಥವಾಗಿದೆ.
ಬಿಜ್ಜಳನ ಕೊಲೆಯಾದುದನ್ನು ತಿಳಿಸುವಾಗ ಜಗದೇವ, ಮಲ್ಲ ಹಾಗೂ
ಬ್ರಹ್ಮಯ್ಯ ಸೇರಿ ಕೊಲೆಮಾಡಿದರೆಂದು ಈ ಗ್ರಂಥದಲ್ಲಿದೆ.
ಸೋಮನಾಥನು ಬಸವಣ್ಣ ಲಿಂಗೈಕ್ಯನಾದ ಮೇಲೆ ಆತನ ಕುರಿತ, ಪ್ರಚಾರ-
ದಲ್ಲಿದ್ದ ಸಂಗತಿಗಳನ್ನು, ಪವಾಡಗಳನ್ನು ಅಪರಿಮಿತ ಭಕ್ತಿಶ್ರದ್ಧೆಗಳಿಂದ ಸಂಗ್ರಹ-
ಮಾಡಿ ಬರೆದಿದ್ದನು. ಅಲ್ಲದೆ, ವೀರಶೈವ ಧರ್ಮತತ್ತ್ವಗಳನ್ನು ತಿಳಿಸುವ, ಹಾಗೂ,
ಬಸವಣ್ಣನನ್ನು ಸ್ತುತಿಸುವ ಹಲವು ಸಣ್ಣ ಕಾವ್ಯಗಳನ್ನು ಬರೆದಿದ್ದನೆಂದೂ ಅವುಗಳಲ್ಲಿ
ಹಲವು ನಷ್ಟವಾಗಿವೆಯೆಂದೂ ತಿಳಿಯುತ್ತದೆ. ಆತನ ವೃಷಾಧಿಪ ಶತಕದಲ್ಲಿ
" ಬಸವಾ ಬಸವಾ ಬಸವಾ ವೃಷಾಧಿಪಾ" ಎಂಬ ಮಕುಟವು ಪದ್ಯಗಳ ಕೊನೆಯಲ್ಲಿ
ಬರುವುದು.

ಕನ್ನಡದಲ್ಲಿ ಸಹ ಶರಣಬಸವರಗಳೆ, ಬಸವಲಿಂಗ ನಾಮಾವಳಿ ಮುಂತಾದ
ಚಿಕ್ಕ ಗ್ರಂಥಗಳನ್ನು ಬರೆದಿದ್ದನು.
ಈ ಸೋಮನಾಥನ ಶಿಷ್ಯಪರಂಪರೆಯಲ್ಲಿ ಪಿಡುಪರ್ತಿ ಸೋಮನಾಥನ,
ಪಾಲ್‌ಕುರಿಕೆ ಸೋಮನಾಥನ ದ್ವಿಪದಿ ಕಾವ್ಯವನ್ನು ಪದ್ಯಕಾವ್ಯವಾಗಿ ಬರೆದಿರುವ-
ವನಲ್ಲದೆ, ಚಾಮರಸನ ಪ್ರಭುಲಿಂಗಲೀಲೆಯನ್ನು ತೆಲುಗಿಗೆ ಅನುವಾದಮಾಡಿದನು.
ಬಸವಚರಿತವನ್ನು ಯಕ್ಷಗಾನ ರೂಪದಲ್ಲಯೂ ಹಲವು ತೆಲುಗು ಕವಿಗಳು ಬರೆದಿದ್ದಾರೆ.
ಬಸವಣ್ಣನ ಹಾಗೂ ಗಂಗಾಂಬಿಕೆ ಮತ್ತು ನೀಲಾಂಬಿಕೆಯರ ವಿವಾಹವು ಯಕ್ಷಗಾನ-
ವೊಂದರ ವಸ್ತುವಾಗಿದೆ.
ಬಂಡಾರು ತಮ್ಮಯ್ಯ ಎಂಬವರು ತೆಲುಗು ಕವಿಗಳು ಪ್ರಾರಂಭದಿಂದಲೇ
ಬಸವೇಶ್ವರನ ಶ್ರೇಷ್ಠತೆಯನ್ನು ಮನ್ನಿಸಿದರು ಎಂದು ಬರೆದಿದ್ದಾರೆ.
ಸಿದ್ದಗಂಗಾ



**ತಮಿಳು ಗ್ರಂಥಗಳು :-** ತಮಿಳು ಭಾಷೆಯಲ್ಲಿ ಬಸವಣ್ಣನ ಚರಿತ್ರೆಯನ್ನು ನಿರೂಪಿಸುವ, ಕವಿ ಯಾರೆಂದು ತಿಳಿಯದ, ದೀರ್ಘವಾದ ಬಸವ ಪುರಾಣವು ರಚಿತವಾದುದು ಪ್ರಸಿದ್ಧವಾಗಿದೆ. ಪಾಲ್ಕುರಿಕೆ ಸೋಮನಾಥನ ತೆಲುಗು ಕಾವ್ಯವನ್ನು ಅವಲಂಬಿಸಿ ರಚಿತವಾಗಿದೆ.

ಈ ಗ್ರಂಥದಲ್ಲಿ ಬಸವಣ್ಣನು ಬಿಜ್ಜಳನ ಮಹಾಪ್ರಧಾನನೂ ಮುಖ್ಯ ಸೇನಾಪತಿಯೂ ಎಂದು ಸ್ಪಷ್ಟವಾಗಿ ತಿಳಿಸಲಾಗಿದೆ.

ತಮಿಳು ಪ್ರಭುಲಿಂಗಲೀಲೆಯು ಶ್ರೇಷ್ಠರಾದ ಶಿವಪ್ರಕಾಶಸ್ವಾಮಿಗಳಿಂದ ೧೭ ನೇ ಶತಕದಲ್ಲಿ ರಚಿತವಾಯಿತು. ಅದರಲ್ಲಿ ಬಸವಣ್ಣನ ಚರಿತ್ರೆಯು ಸಂಕ್ಷಿಪ್ತವಾಗಿ ಬಂದಿದೆ ಇದರಿಂದಲೇ ರಚಿತವಾದ 'ಸಿದ್ಧಾಂತ ಶಿಖಾಮಣಿ' ಎಂಬ ವೀರಶೈವ ಸಿದ್ಧಾಂತವನ್ನು ವಿವರಿಸುವ ಶ್ರೇಷ್ಠಗ್ರಂಥದಲ್ಲಿ ಬಸವಣ್ಣನನ್ನು ಪೂಜಿಸುವುದು ಸಾವಿರಾರು ಶರಣರನ್ನು ಪೂಜಿಸಿದುದಕ್ಕೆ ಸಮವಾಗಿದೆ ಎಂದು ಶ್ಲಾಘಿಸಿದುದುಂಟು (S. Somasundaram in Basaveswara commemoration volume p. 429)

ತಮಿಳು ಪ್ರಭುಲಿಂಗಲೀಲೆಯಲ್ಲಿ ಶಿವಪ್ರಕಾಶಸ್ವಾಮಿಗಳು ಎಲ್ಲಾ ಧರ್ಮಗಳಲ್ಲಿಯೂ ಯುಕ್ತಿಯುಕ್ತವಾದ ಮತ್ತು ಸತ್ತ್ವಭರಿತವಾದ ತತ್ತ್ವಗಳಿಂದಾಗಿ ವೀರಶೈವಧರ್ಮವು ವೇಲ್ಮೆಯನ್ನು ಪಡೆದಿದೆಯೆಂದು ಶಂಕರನು ಉಮಾದೇವಿಗೆ ತಿಳಿಸಿದನೆಂದು ಅರುಹಿದ್ದರು.

**ಸಂಸ್ಕೃತಗ್ರಂಥಗಳು:** ಸಂಸ್ಕೃತದಲ್ಲಿ ಎರಡು ವೃಷಭ ಪುರಾಣಗಳು ಮುಖ್ಯವಾದವು. ಪಾಲ್ಕುರಿಕೆ ಸೋಮನಾಥನ ಬಸವರಾಜೀಯಂ ವೀರಶೈವ ಮತ ಸಿದ್ಧಾಂತವನ್ನು ವಿವರಿಸುವ ಸಂಸ್ಕೃತ ಗ್ರಂಥ. ಬಸವ ಸ್ತೋತ್ರಮಾಡಿದ ಆತನ ಹಲವು ಸಂಸ್ಕೃತ ಗ್ರಂಥಗಳಿವೆ. ಶಿವತತ್ತ್ವರತ್ನಾಕರದಲ್ಲಿ ಬಸವಣ್ಣನ ಚರಿತ್ರೆ ಬಂದಿದೆ.

**ಮರಾಠಿಗ್ರಂಥಗಳು:** ಮರಾಠಿಯಲ್ಲಿ ವೀರಶೈವ ತತ್ತ್ವಶಾಸ್ತ್ರವನ್ನು ಕುರಿತ ಬಹಳ ಗ್ರಂಥಗಳು ಬಂದಿವೆ ಬಸವ ಪುರಾಣವನ್ನು ಯಾವನೋ ಮರಾಠಿಕವಿ ಅನುವಾದಿಸಿದ್ದನು.

ನಂದೀಶ್ವರನು ಶಿವಭಕ್ತಿಯನ್ನು ಬೆಳೆಸಲು ಬಸವಣ್ಣನ ರೂಪದಲ್ಲಿ ಅವತಾರ ತಾಳಿದನೆಂದು ಬಹುತರ ಎಲ್ಲ ಪ್ರಾಚೀನ ಕವಿಗಳೂ ನಿರೂಪಿಸಿದ್ದರು. ಹರಿಹರನು ವೃಷಭಮುಖ ಗಣೇಶ್ವರನು ಷಣ್ಮುಖನಿಗೆ ಶಿವಪ್ರಸಾದವನ್ನು ಕೊಟ್ಟೆನೆಂದು ಸುಳ್ಳನ್ನು ಹೇಳಿದ ತಪ್ಪಿಗೆ ಶಿವನಿಂದ ಭೂಮಿಗೆ ಕಳಿಸಲ್ಪಟ್ಟು ಬಸವಣ್ಣನಾಗಿ ಅವತರಿಸಿದನೆಂದು ರಚಿಸಿದ್ದನು. ಕನ್ನಡದಲ್ಲಿ ಹರಿಹರನ ಅನಂತರ ಬಸವಣ್ಣನ ಚರಿತ್ರೆಯನ್ನು ಹೇಳಿದ ಹಲವಾರು ಪ್ರಾಚೀನ ಕವಿಗಳಲ್ಲಿ ಭೀಮಕವಿ, ಸಿಂಗಿರಾಜ [ ಅಮಲಬಸವ ಚಾರಿತ್ರ ] ಹಾಗೂ ಷಡಕ್ಷರಿ ["ವೃಷಭೇಂದ್ರ ವಿಜಯ,"] ಮುಖ್ಯರು. ಸುರಂಗ, ಧರಣಿಪಂಡಿತ ಮುಂತಾದವರ ಕಾವ್ಯಗಳಲ್ಲಿ ಸಹ ಬಸವಣ್ಣನ ಚರಿತ್ರೆ ವಿಧವಿಧವಾಗಿ ಬಂದಿದೆ.

( ಮುಂದುವರಿಯುತ್ತದೆ.)

# ನಿಸರ್ಗದೊಡನೆಯೂ ಚೆಲ್ಲಾಟವೆ!

ಬಿ. ಸುಬ್ರಾಯ ಅಡಿಗ, ನಿವೃತ್ತ ಶಿಕ್ಷಕರು, ಸಂಡೂರು, ಬಳ್ಳಾರಿ-ಜಿಲ್ಲೆ-583 139

ಅನುವಂಶಿಕೀ ಇಂಜಿನೀಯರಿಂಗ್‌ದಿಂದ ಈ ಕಾಲದ ಆವಶ್ಯಕತೆಗನುಗುಣವಾಗಿ ಪ್ರಾಣಿ ಹಾಗೂ ವನಸ್ಪತಿಗಳ ಹೊಸತಳಿಗಳನ್ನು ತಯಾರಿಸುವುದು ಅಗತ್ಯವೆನಿಸಿದೆ. ಇಲ್ಲದಿದ್ದರೆ ಬೆಳೆಯತ್ತಿರುವ ಜನಸಂಖ್ಯೆಗೆ ತಕ್ಕಂತೆ ಸಾಕಷ್ಟು ಪ್ರಮಾಣದಲ್ಲಿ ಆಹಾರ ಪದಾರ್ಥಗಳನ್ನು ಪಡೆಯುವುದೂ ಒಂದು ಸಮಸ್ಯೆಯೆನಿಸೀತು.

ಪ್ರಯೋಗದ ವೇಳೆ ಒಮ್ಮೆಲೇ ಅತಿ ಶಕ್ತಿಶಾಲಿ ಜೀನ್ ಹೊರಹೊಮ್ಮಿ ಅದನ್ನು ಹತೋಟಿಯಲ್ಲಿರಿಸುವುದೂ ಕಠಿಣವಾಗುವಂತಹ ಪರಿಸ್ಥಿತಿ ಒದಗಬಹುದು. ಆಗ ಸಮಗ್ರಮಾನವ ಸಭ್ಯತೆ, ಇಡೀ ವಿಶ್ವದ ಪೂರ್ಣ ಜೀವನ ಗಂಡಾಂತರಕ್ಕೀಗಡಾಬಹುದು. ಈ ಬಗ್ಗೆ ಆಳವಾಗಿ ಯೋಚಿಸಿದರೆ ಧರ್ಮಾವಲಂಬಿಗಳು ಅನುವಂಶಿಕೀ ಇಂಜನಿಯ-ರಿಂಗ್‌ನ್ನು ವಿರೋಧಿಸುವುದು ಸರಿಯೆಂದೇ ತೋರುತ್ತದೆ. ಅಲ್ಲದೆ ಈ ಜ್ಞಾನದ ದುರುಪಯೋಗ ನಡೆಯಲಾರದೆಂದು ಆದಾರು ಧೈರ್ಯದಿಂದ ಹೇಳಬಲ್ಲರು!

ಮೆಕ್ಸಿಕೋ ವಿಶ್ವವಿದ್ಯಾಲಯದ ಪಶುಚಿಕಿತ್ಸ ವಿಭಾಗದಲ್ಲಿ ಕೆಲಕಾಲದ ಹಿಂದೆ ಹಸುವಿನ ಹೊಸತಳಿಯೊಂದನ್ನು ವಿಕಾಸ ಗೊಳಿಸಲಾಯಿತು. ಈ ಹಸು ಬರೀ 60 ಸೆ.ಮಿ. ಅರ್ಥಾತ್ ಎರಡು ಅಡಿ ಎತ್ತರವಾದುದು. ಇದರ ಭಾರ ಸುಮಾರು 125 ಕೀ ಗ್ರಾಂ. ಇದರ ಅತಿ ವಿಶಿಷ್ಟಗುಣವೆಂದರೆ ಇದು ದಿನಕ್ಕೆ 4ಲೀಟರ್ ದಷ್ಟು ಹಾಲು ಕೊಡಬಲ್ಲದು. ಇದರ ಆಹಾರ ಬಲುಕಡಿಮೆ.

"ಜೇಬೂ" ಜಾತಿಯ ಹಸುವನ್ನು ವಿಕಾಸಗೊಳಿಸಿ ಇದನ್ನು ಪಡೆಯಲಾಯಿತು ನಿಜವಾದ ಜೇಬುಹಸು 2ಮೀಟರ್ ಎತ್ತರ ಇರುತ್ತದೆ. ಅದು ದಿನಕ್ಕೆ 6 ಲೀಟರ್ ಹಾಲು ಕೊಡುತ್ತದೆ. ಜೇಬೂ ತಳಿಯ ಒಂದು ಹಸು ದಿನಾಲೂ ತಿನ್ನುವಷ್ಟು ಆಹಾರ ದಿಂದ ಹೊಸದಾಗಿ ತಯಾರಿಸಿದ ಪುಟ್ಟಜಾತಿಯ ಹತ್ತು ಜೇಬೂ ಹಸುಗಳನ್ನು ಸುಲಭವಾಗಿ ಸಾಕಬಹುದು.

1982ನೇ ವರ್ಷ ಆರಂಭವಾಗುವುದಕ್ಕೆ ಮೊದಲು ಇಂಥ ಸಣ್ಣ ಜಾತಿಯ 18 ಹಸುಗಳನ್ನು ವಿಕಾಸಗೊಳಿಸಲಾಗಿತ್ತು. ಅವಕ್ಕೆ ಸುಮಾರು ಒಂದು ಡಜನ್ ಕರುಗ ಳಾದವು. ಈ ಕರುಗಳು ಎಷ್ಟು ಸಣ್ಣಗಿವೆಯೆಂದರೆ ಹುಲ್ಲುಗಾವಲನಡುವೆ ಕಳೆದು ಹೋಗುವುವೋ ಎಂಬ ಸಂದೇಹವಾಯಿತು. ಈಗಲೂ ಈ ಹಸುಗಳಮೇಲೆಪ್ರಯೊಗ ನಡೆಸುತ್ತಲೇ ಇದೆ. ಸಾಕಣೆ ಸುಲಭವಾಗಿದ್ದು ಕಡಿಮೆವೆಚ್ಚದಲ್ಲಿ ಹೆಚ್ಚಲಾಭಕೊಡು ವಂತಹ ತಳಿಯನ್ನು ವಿಕಾಸಪಡಿಸುವುದು ವಿಜ್ಞಾನಿಗಳ ಉದ್ದೇಶವಾಗಿತ್ತು.



ವಿಜ್ಞಾನಿಗಳು ಸಂಕರಣ ವಿಧಾನದಿಂದ ವಿಕಾಸಗೊಳಿಸಿದ ಪ್ರಾಣಿಗಳಲ್ಲಿ ಅತಿ ಹೆಚ್ಚು ಜನಪ್ರಿಯವಾದ ಪ್ರಾಣಿ ಹೇಸರಕತ್ತೆ. ಇದೇ ರೀತಿ ಗಂಡು ಚಿರತೆ ಮತ್ತು ಹೆಣ್ಣು ಸಿಂಹದ ಮಿಲನದಿಂದ "ಟಿಗ್‌ಲಯನ್" ಎಂಬ ಪ್ರಾಣಿಯನ್ನು ನಿರ್ಮಿಸ ಲಾಯಿತು. ಕತ್ತೆ ಮತ್ತು ಜೀಬ್ರಾದ ಮಿಲನದಿಂದ "ಜಬ್ರಾಯೇಡ್" ಸೃಷ್ಟಿಸಲಾಯಿತು.

ಗಂಡು ಹುಲಿ ಮತ್ತು ಹೆಣ್ಣು ಚಿರತೆಯ ಮಿಲನದಿಂದ "ಪೆಂಥೋಪಾರ್ಡ್" ಎಂಬ ಹೊಸತಳಿಯನ್ನು ತಯಾರಿಸಲಾಯಿತು. ಗಂಡು ಸಿಂಹ ಮತ್ತು ಹೆಣ್ಣು ಚಿರತೆಯ ಸಂಪರ್ಕದಿಂದ ಲೈನರ್ ಎಂಬ ಹೊಸಜಾತಿಯನ್ನು ತಯಾರಿಸಲಾಯಿತು. ಕೆಲ ವಿಜ್ಞಾನಿಗಳು ಲೈನರ್‌ನ್ನು ಲೀನರ್ ಎಂದು ಕರೆಯುತ್ತಾರೆ.

ಅತಿ ಕಡಿಮೆ ಆಹಾರ ತೆಗೆದುಕೊಂಡು ಅತಿ ಹೆಚ್ಚು ಮಾಂಸ ಕೊಡಬಲ್ಲಂತಹ ಹೊಸ ತಳಿಯ ಹಸುವೊಂದನ್ನು ಹಸು ಮತ್ತು ಕೋಣನ ಸಂಪರ್ಕದಿಂದ ಅಮೇರಿಕೆ ಯಲ್ಲಿ ವಿಕಾಸಪಡಿಸಲಾಯಿತು. ಇದೇ ರೀತಿ ಮೇಕೆ ಮತ್ತು ಟಗರಿನ ಮಿಲನದಿಂದ ನಿರ್ಮಿಸಲಾದ ಪ್ರಾಣಿಯನ್ನು ಆಧುನಿಕ ಬ್ರಹ್ಮರು "ಶೀಗೊಟ್" ಎಂಬ ಹೆಸರಿನಿಂದ ಕರೆಯುತ್ತಾರೆ.

ಇದು ಪನಕ ಸಂಕರ ಪ್ರಾಣಿಗಳಷ್ಟೇ ತಯಾರಾಗುತ್ತಿದ್ದವು. ಈಗ ಸಂಕರ ಜೀನ್‌ಗಳೂ ಸೃಷ್ಟಿಯಾಗತೊಡಗಿವೆ. ಇದರಿಂದಾಗಿ ಹೊಸತಳಿಯ ತಯಾರಿಕೆ ಇನ್ನಷ್ಟು ಸುಲಭವಾಗಿದೆ ಇತ್ತೀಚೆಗೆ ಅನುವಂಶಿಕೀ ವಿಜ್ಞಾನಿಗಳು ಬೇರೆ ಬೇರೆ ಜಾತಿಯ ಪ್ರಾಣಿಗಳ ಕೋಶಗಳನ್ನು ಸೇರಿಸಿ ಹೊಸರೀತಿಯ ವಿಚಿತ್ರ ತಳಿಗಳನ್ನು ತಯಾರಿಸಿದ್ದಾರೆ

ಈ ಪ್ರಯೋಗಗಳಲ್ಲಿ ಇಲಿಯ ಕೋಶಗಳೊಳಗೆ ಮಾನವ ವಿಕಾಸದ ಹಾರ್ಮೋನ್ ಗಳನ್ನು ನಿರ್ಮಿಸುವ ಜೀನ್‌ಗಳನ್ನು ಸೇರಿಸಲಾಯಿತು. ಕೆಲವು ಇಲಿಗಳ ಮೇಲೆ ಇದು ಯಾವುದೇ ಪರಿಣಾಮ ಬೀರಲಿಲ್ಲ. ಆದರೆ ಕೆಲವು ಇಲಿಗಳಲ್ಲಿ ಇದು ತುಂಬಾ ಸಫಲವಾಯಿತು. ಅವುಗಳಲ್ಲಿ ಮಾನವ ಹಾರ್ಮೋನ್‌ಗಳು ಚೆನ್ನಾಗಿ ಕೆಲಸಮಾಡ ತೊಡಗಿದವು. ಮಾನವ ಹಾರ್ಮೋನ್‌ಗಳಿಂದಾಗಿ ಈ ಇಲಿಗಳ ಆಕಾರ ಅತ್ಯಧಿಕ ಹೆಚ್ಚಿತು ಇವನ್ನು ವಿಜ್ಞಾನಿಗಳು ಸೂಪರ್ ಇಲಿಗಳೆಂದು ಕರೆದರು. ಇನ್ನು ಮುಂದೆ ಈ ಇಲಿಗಳು "ಮಾನವ ಜೀನ್"ಗಳನ್ನು ವಂಶಪಾರಂಪರ್ಯವಾಗಿ ಕೊಡಬಲ್ಲವು.

ವಿಜ್ಞಾನಿಗಳು ಸೂಪರ್ ಮ್ಯಾನ್ ತಯಾರಿಸಲು ಈ ಎಲ್ಲ ಪ್ರಯೋಗ ಮಾಡು ತ್ತಿಲ್ಲವೆಂದೂ ಜೀನ್‌ಗಳ ಕಾರ್ಯವಿಧಾನವನ್ನರಿಯುವುದೇ ಈ ಪ್ರಯೋಗಗಳ ಉದ್ದೇಶವೆಂದೂ ಡಾ|| ಮಿಂಟ್ಸೆ ಹೇಳುತ್ತಾರೆ. ಆದರೆ ಮುಂದೊಂದು ದಿನ ಯಾವ ನಾದರೂ ತಲೆತಿರುಕ ವಿಜ್ಞಾನಿ ಮಾನವಾಕೃತಿಯ ಇಲಿಗಳನ್ನು ಅತ್ಯಧಿಕ ಸಂಖ್ಯೆಯಲ್ಲಿ ತಯಾರಿಸಿ ಮನುಷ್ಯ ಜನಾಂಗಕ್ಕೇ ಗಂಡಾಂತರ ಒಡ್ಡಬಹುದು. ಸೂಪರ್ ಇಲಿ-ಯಂತೆಯೇ ಸೂಪರ್ ಬೆಕ್ಕನ್ನು ತಯಾರಿಸಿದರೆ ಆ ಹೊಸ ಜೀವನ ಅತ್ಯಧಿಕ ಹಿಂಸ್ರ (ಕ್ರೂರ) ಎನಿಸಬಹುದು.

ಪ್ರಾಚೀನ ಗ್ರಂಥಗಳಲ್ಲಿ ವರ್ಣಿತವಾದ ವರಾಹಾವತಾರ, ಮತ್ಸ್ಯಾವತಾರ, ನರಸಿಂಹಾವತಾರ ಮೊದಲಾದುವು ಅನುವಂಶಿಕೀ ಇಂಜಿನಿಯರಿಂಗ್‌ದ ಚಮತ್ಕಾರವೆಂದೇ ತೋರುವುದು ಬಹುಶಃ ಹಂದಿಯಲ್ಲಿ ಮಾನವ ಜೀನ್ ಸೇರಿಸಿ, ವರಹಾವತಾರ ಮೀನಿನಲ್ಲಿ ಮಾನವ ಜೀನ್ ಸೇರ್ಪಡಿಸಿ ಮತ್ಸ್ಯಾರವನ್ನು ಸಿಂಹದೊಳಗೆ ಮಾನವ ಜ್ೕನ್ ಸೇರಿಸಿ ನರಸಿಂಹಾವತಾರವನ್ನು ಪಡೆದಿರಬೇಕು.

ಪ್ರಾಚೀನಯುಗದಲ್ಲಿ ವೈಜ್ಞಾನಿಕ ಕಾರ್ಯಗಳಲ್ಲಿ ರಾಜಕೀಯ ಹಸ್ತಕ್ಷೇಪ ಇರುತ್ತಿರಲಿಲ್ಲ ಆ ಕಾಲದಲ್ಲಿ ರಾಜನೀತಿಜ್ಞರು ವಿಜ್ಞಾನಿಗಳನ್ನು ಗೌರವಿಸುತ್ತಿದ್ದರು. ಆಗ ವಿಧ್ವಂಸಕ ಅಥವಾ ವಿನಾಶಕರ ಶೋಧದ ರಹಸ್ಯಗಳನ್ನು ವಿಜ್ಞಾನಿಗಳು ಅತ್ಯಗತ್ಯ ವುಂಟಾದಾಗಲೇ ರಾಜನೀತಿಜ್ಞರಿಗೆ ತಿಳಿಸುತ್ತಿದ್ದರು.

ನಮ್ಮ ದೇಶದಲ್ಲೂ ತಳಿಸುಧಾರಣೆಯ ಹಲವಾರು ಕಾರ್ಯಕ್ರಮಗಳು ನಡೆಯುತ್ತಿವೆ. ಬೇಸಾಯ, ಪಶುಪಾಲನೆ-ಮೊದಲಾದ ಹಲವಾರು ಕ್ಷೇತ್ರಗಳಲ್ಲಿ ನಾವು ತಳಿಸುಧಾರಣೆಯಿಂದಾಗಿ ಅಲ್ಪ ಸ್ವಲ್ಪ ಸಫಲತೆ ಹೊಂದಿದ್ದರೂ ನಮ್ಮ ದೇಶದಲ್ಲಿ ಈ ವಿಜ್ಞಾನ ಬಹಳಷ್ಟು ಹಿಂದುಳಿದಿದೆಯೆಂದೇ ಹೇಳಬಹುದು. (ಸಂಗ್ರಹ)



# ಮಹಿಳೆ ಮತ್ತು ಸಮಾನತೆ

ಶ್ರೀಮತಿ ಸಾರಾ ಅಬೂಬಕ್ಕರ್, ಮಾರ್ಟಿನ್ ಪಾಯಸ್ ರಸ್ತೆ, ಲಾಲ್‌ಬಾಗ್, ಮಂ-575006.

ಈಗ ಒಂದೆರಡು ವರ್ಷಗಳ ಹಿಂದೆ ದಕ್ಷಿಣ ಕನ್ನಡದ ಒಂದೆಡೆ ನಾನು ಒಂದು ಸಾಹಿತ್ಯ ಸಮಾರಂಭದಲ್ಲಿ ಭಾಗವಹಿಸಲು ಹೋಗಿದ್ದಾಗ ಒಬ್ಬ ತರುಣ ನನ್ನೊಡನೆ "ಮಹಿಳೆಯರು ತುಂಬಾ ಕೆಟ್ಟದಾಗಿ ಬರೆಯುತ್ತಾರೆ. ಅದರ ಕುರಿತು ನಿಮ್ಮ ಅಭಿಪ್ರಾಯವೇನು ?" ಎಂದು ಕೇಳಿದನು.

"ಪುರುಷರು ಬರೆಯುವುದೆಲ್ಲವೂ ಅತ್ಯುತ್ತಮವೇ ?, ಮಹಿಳೆಯರಿಗಿಂತಲೂ ಕೆಟ್ಟದಾಗಿ ಬರೆಯುವ ಪುರುಷರಿಲ್ಲವೇ ?" ಎಂದು ನಾನು ಅವನೊಡನೆ ಕೇಳಿದೆ. ಮಹಿಳೆಯರು ಬರೆಯುವುದೆಲ್ಲವೂ ಕಳಪೆ ಸಾಹಿತ್ಯ ಎಂಬ ಪೂರ್ವಾಗ್ರಹವನ್ನು ಮೈಗೂಡಿಸಿಕೊಂಡೇ ಕೇಳಿದ ಪ್ರಶ್ನೆ ಇದಾಗಿರಬಹುದು. ಜ್ಞಾನಪೀಠ ಪ್ರಶಸ್ತಿ ಪಡೆದ ಮಹಿಳೆಯರಿದ್ದಾರೆ; ಅಷ್ಟೇ ಏಕೆ ಜಗತ್ತಿನಲ್ಲಿಯ ಶ್ರೇಷ್ಠ ಸಾಹಿತ್ಯ ಪುರಸ್ಕಾರವಾದ ನೋಬೆಲ್ ಪಾರಿತೋಷಕವನ್ನೂ ಪಡೆದ ಮಹಿಳೆಯರೂ ಕೂಡಾ ಇದ್ದಾರೆ ಎಂಬುದು ಆತನಿಗೆ ತಿಳಿದಿರಲಾರದಷ್ಟು ಅಜ್ಞಾನಿ ಆತನಾಗಿರಬಹುದು ಎಂದೆನಿಸಿತು. ಬಹುಶಃ ಇಲ್ಲಿ ನಡೆದ ಗೋಷ್ಠಿಗಳ ಪ್ರಬಂಧಗಳನ್ನು ಆತ ಕೇಳಿದ್ದರೆ ಆತ ತನ್ನ ಅಭಿಪ್ರಾಯವನ್ನು ಬದಲಾಯಿಸಿಕೊಳ್ಳುತ್ತಿದ್ದನೋ ಏನೋ. ಮಹಿಳೆಯರು ಬರೆದುದೆಲ್ಲವೂ ಕಳಪೆಯಲ್ಲ. ಅವುಗಳಲ್ಲೂ ಸಾಕಷ್ಟು ತಿರುಳಿದೆ ಎಂಬುದನ್ನು ಕಳೆದ ಹಲವು ವರ್ಷಗಳಿಂದಲೂ ಮಹಿಳೆಯರು ಸಾರುತ್ತಾ ಬಂದಿದ್ದಾರೆ.

ಕರ್ನಾಟಕದಲ್ಲಿ ಇಂದು ಸಾಕಷ್ಟು ಸಂಖ್ಯೆಯ ಮಹಿಳೆಯರು ಸಾಹಿತ್ಯ ರಚನೆಗೆ ಕೈಯಿಕ್ಕಿದ್ದಾರೆ. ಸುಮಾರು 200 ಕ್ಕಿಂತಲೂ ಹೆಚ್ಚು ಲೇಖಕಿಯರು ಈಗಾಗಲೇ ಬೆಳಕು ಕಂಡಿದ್ದಾರೆ. ಆದರೆ ಮಹಿಳೆಯರಿಂದ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಅರ್ಹವಾದ ಕೃತಿಗಳು ಮಾತ್ರ ಸಾಕಷ್ಟು ಸಂಖ್ಯೆಯಲ್ಲಿ ಹೊರ ಬರುತ್ತಿಲ್ಲ. ಇದಕ್ಕೆ ಕಾರಣವೂ ಇಲ್ಲದಿಲ್ಲ. ಸ್ವಂತ ಅನುಭವದಿಂದ ಮೂಡಿ ಬಂದ ಕೃತಿಗಳು ಮಾತ್ರ ಉತ್ತಮ ಕೃತಿಗಳು ಎನಿಸಿಕೊಳ್ಳಬಲ್ಲುವು ಎಂಬುದು ಒಂದು ಸಾಮಾನ್ಯ ತಿಳುವಳಿಕೆ. ಆದರೆ ಅಂತಹ ಅನುಭವ ಪಡೆದುಕೊಳ್ಳುವುದು ಹೇಗೆ ? ನಮ್ಮ ಭಾರತೀಯ ಸಮಾಜ ವ್ಯವಸ್ಥೆಯಲ್ಲಿ ಎಷ್ಟು ಜನ ಮಹಿಳೆಯರಿಗೆ ನಾಲ್ಕೂರು ಸುತ್ತಿ ಅನುಭವ ಪಡೆಯುವ ಅವಕಾಶವಿದೆ ? ನಮ್ಮ ಮಹಿಳೆಯರ ಅನುಭಗಳೇನಿದ್ದರೂ ತಮ್ಮ ಮನೆಯ ನಾಲ್ಕು ಗೋಡೆಗಳೊಳಗಿನ ಅನುಭವಗಳಷ್ಟೇ. ಇತ್ತೀಚೆಗೆ ಅಂದರೆ ಕಳೆದ ಎರಡು ಮೂರು ದಶಕಗಳಿಂದ ಮಹಿಳೆಯರು ಹೊರ ಪ್ರಪಂಚಕ್ಕೆ ಕಾಲಿಟ್ಟು ದುಡಿಯಲಾರಂಭಿಸಿದ್ದಾರೆ. ಅಲ್ಲೂ ಕೂಡಾ ಅವರ ಅನುಭವಗಳು ಒಂದು ಮಿತಿಯೊಳಗೇ ಇರುತ್ತದೆ. ಅಥವಾ ಅನುಭವವಿದ್ದರೂ ಅದನ್ನು ಕೃತಿರೂಪಕ್ಕಿಳಿಸಲು ಪುಸ್ತಕ ರೂಪದಲ್ಲಿ ಪ್ರಕಟಿಸಲು

ಎಷ್ಟು ಜನ ಮಹಿಳೆಯರಿಗೆ ಅದಕ್ಕೆ ಬೇಕಾದ ಸೌಲಭ್ಯ, ಆರ್ಥಿಕ ಸ್ವಾತಂತ್ರ್ಯವಿದೆ ?
ಹೆಜ್ಜೆ ಮುಂದಿಟ್ಟರೆ ನಾಲ್ಕು ಹೆಜ್ಜೆ ಹಿಂದಿಡಬೇಕಾದಂತಹ ಪರಿಸ್ಥಿತಿ ನಮ್ಮ ಮಹಿಳೆ
ಯರದ್ದು. ಪಾಶ್ಚಿಮಾತ್ಯ ಮಹಿಳೆಯರಂತೆ ಸ್ವತಂತ್ರವಾಗಿ ನಾಲ್ಕೂರು ತಿರುಗಿ ತಮ್ಮ
ದಲ್ಲದ, ತಮಗೆ ಅಪರಿಚಿತವಾದ ಸಂಸ್ಕೃತಿಯೊಂದನ್ನು ಇಣುಕಿಯಾದರೂ ನೋಡುವ
ಅವಕಾಶ ಎಷ್ಟು ಜನ ಮಹಿಳೆಯರಿಗಿತ್ತು ಅಥವಾ ಈಗಲೂ ಇದೆ? ಮಹಿಳೆಯರ
ಈ ಅನುಭವ ಕೊರತೆ ಮತ್ತು ಅವರು ಅವಕಾಶ ವಂಚಿತರಾದ ಕಾರಣದಿಂದಾಗಿಯೇ
ಇಂದು ಕರ್ನಾಟಕದ ಜನಸಂಖ್ಯೆಯಲ್ಲಿ ಶೇಕಡಾ 30 ರಷ್ಟು ಇರುವ ಮುಸ್ಲಿಮರ
ಬದುಕಿನ ಪ್ರತಿಬಿಂಬ ಕನ್ನಡ ಸಾಹಿತ್ಯದಲ್ಲಿ ಮೂಡಿ ಬರಲೇ ಇಲ್ಲ. ಪುರುಷ ಸಾಹಿತ್ಯ
ದಲ್ಲಿ ಓರ್ವ ವೇಶ್ಯೆಯಾಗಿಯೋ, ಸಾಬನ ಹೆಂಡತಿಯಾಗಿಯೋ, ಜಟಕ ಸಾಬಿಯಾ-
ಗಿಯೊ, ಮೀನು ಮಾರುವ ಬ್ಯಾರಿಯಾಗಿಯೊ ಕಾಣಿಸಿಕೊಂಡ ಮುಸ್ಲಿಂ ಸ್ತ್ರೀ ಪುರುಷ
ಪಾತ್ರಗಳು ಮಹಿಳಾ ಸಾಹಿತ್ಯದಲ್ಲಿ ಅಪ್ಪಿ ತಪ್ಪಿಯೂ ಕಾಣಸಿಗಲಿಲ್ಲ. ಕೆಲವು ದಿನಗಳ
ಹಿಂದೆ ಬೆಂಗಳೂರಿನಲ್ಲಿ ಓರ್ವ ಹಿರಿಯರು ನನ್ನೊಡನೆ, "ಕರ್ನಾಟಕದ ವ್ಯಾಪಿನಲ್ಲಿ
ಮುಸ್ಲಿಂ ಮಹಿಳೆಯರನ್ನು ಕಾಣಿಸಿ ಅವರಿಗೆ ಸ್ಥಾನ ಕೊಟ್ಟ ಪ್ರಥಮ ಮಹಿಳೆ
ನೀವಾಗಿದ್ದೀರಿ" ಎಂದರು. ಹಾಗೆಯೇ ನನ್ನ ಪ್ರಥಮ ಕಾದಂಬರಿ "ಚಂದ್ರಗಿರಿ ತೀರದಲ್ಲಿ"
ಪ್ರಕಟವಾದಾಗ ಕನ್ನಡದಲ್ಲಿ ಈ ಅನುಭವ ಹೇಳುವ ಮೊತ್ತ ಮೊದಲ ಕಾದಂಬರಿ
ಎಂದು ಹೆಸರು ಪಡೆಯಿತು.

ಈ ರೀತಿ ಇಷ್ಟು ದೊಡ್ಡ ಜನಸಮುದಾಯದ ಸಾಮಾಜಿಕ ಬದುಕಿನ ಸಮನಾದ
ಪ್ರತಿಬಿಂಬ ಕನ್ನಡ ಸಾಹಿತ್ಯದಲ್ಲಿ ಮೂಡಿಬರದ ಕಾರಣ ಇಲ್ಲಿನ ಬಹು ಸಂಖ್ಯಾತರು
ಮುಸ್ಲಿಮರ ಕುರಿತು ಅಜ್ಞಾನಿಗಳಾಗಿಯೇ ಉಳಿಯುವಂತಾಯಿತು. ಮುಸ್ಲಿಮ
ರೆಂದರೆ ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಎಲ್ಲರೂ ಉರ್ದು ಮಾತನಾಡುವವ
ರೆಂದೂ, ಮುಸ್ಲಿಂ ಪುರುಷರೆಲ್ಲರೂ ನಾಲ್ಕು ಮದುವೆ ಮಾಡಿ ಕೊಳ್ಳುವವರೆಂದೂ
ಮನೆತುಂಬ ಮಕ್ಕಳನ್ನು ಹುಟ್ಟಿಸುವವರೆಂದೂ ಒಂದು ಸಾಮಾನ್ಯ ತಿಳುವಳಿಕೆ ಬಹು
ಸಂಖ್ಯಾತರಲ್ಲಿ ಬೇರೂರಿಬಿಟ್ಟಿತು. ನನಗೆ ಉರ್ದು ಭಾಷೆ ಬರುವುದಿಲ್ಲವೆಂದರೆ
"ಹಾಗಾದರೆ ನೀವು ಮುಸ್ಲಿಮರಲ್ಲವಾ ?" ಎಂಬ ಪ್ರಶ್ನೆ ಕೂಡಲೇ ಹೊರಬೀಳುತ್ತದೆ.
ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುವ ಮುಸ್ಲಿಮರು ಬೇರೆ ಬೇರೆ ಭಾಷೆ ಮಾತನಾಡು
ತ್ತಾರೆ, ತಮ್ಮದೇ ಆದ ಹಲವಾರು ಪದ್ಧತಿಗಳನ್ನೂ ಮೈಗೂಡಿಸಿಕೊಂಡಿದ್ದಾರೆ,
ಇತರೆಡೆಯ ಮುಸ್ಲಿಮರಿಂದ ಪೂರ್ಣ ಭಿನ್ನವಾದ ಸಂಸ್ಕೃತಿಯನ್ನೂ ಮೈಗೂಡಿಸಿ
ಕೊಂಡಿದ್ದಾರೆ ಎಂಬ ಕುರಿತು ಯಾವುದೇ ಜ್ಞಾನವಿಲ್ಲದೇ ದೇಶಾದ್ಯಂತವಿರುವ ಮುಸ್ಲಿ
ಮರನ್ನು ಒಂದೇ ಚೌಕಟ್ಟಿನಲ್ಲಿಟ್ಟು ನೋಡುವ, ಅಳೆಯುವ ಪ್ರವೃತ್ತಿ ಬಂದುಬಿಟ್ಟಿತು.
ಹಲವು ರಾಜಕೀಯ ಕಾರಣಗಳಿಂದಾಗಿ, ಮತ್ತು ಸ್ವಾರ್ಥಿ ರಾಜಕಾರಣಿಗಳಿಂದಾಗಿ
ಈ ಎರಡು ಸಮಾಜಗಳ ನಡುವಿನ ಕಂದಕ ಆಳವೂ ಅಗಲವೂ ಆಗುತ್ತಾ ಹೋಯಿತು.



ಮುಸ್ಲಿಮರಂತೂ ತಮ್ಮ ಚಿಪ್ಪಿನೊಳಗೆ ಇನ್ನಷ್ಟು ಮುದುಡಿಕೊಂಡರೇ ಹೊರತು
ಈ ಚಿಪ್ಪಿನಿಂದ ಹೊರಬಂದು ಇಲ್ಲಿನ ಮುಸ್ಲಿಮೇತರರೊಡನೆ ಮೈತ್ರಿ ಬೆಳೆಸುವ
ಗೋಜಿಗೇ ಹೋಗಲಿಲ್ಲ. ಮಕ್ಕಳಿಗೆ ಮಾತು ಬಂದೊಡನೆ 'ಅವರು' ಮತ್ತು 'ನಾವು'
ಎಂಬ ಶಬ್ದವನ್ನು ಕಂಠಪಾಠ ಮಾಡಿಸಲಾರಂಬಿಸಿದರು. ಮುಸ್ಲಿಮರ ಈ ಹಿಂಜರಿಕೆಯ
ಸ್ವಭಾವ, ಅನುಮಾನ ದೃಷ್ಟಿಗೆ ಬಹು ಸಂಖ್ಯಾತರು ಬೇರೆಯೇ ಅರ್ಥಕಲ್ಪಿಸತೊಡ
ಗಿದರು. ಭಾಷೆ ಮತ್ತು ಅದರಿಂದ ಸೃಷ್ಟಿಯಾದ ಸಾಹಿತ್ಯ ಅಂದರೆ ಉರ್ದು ಮತ್ತು
ಕನ್ನಡ ಸಾಹಿತ್ಯ ಪರಸ್ಪರ ಕೊಡುಕೊಳ್ಳುವಿಕೆಯನ್ನು ಮೈಗೂಡಿಸಿಕೊಂಡಿದ್ದರೆ
ಈ ಎರಡು ಸಮುದಾಯಗಳ ನಡುವೆ ಸ್ನೇಹ ಸೇತುವೆಯೊಂದು ನಿರ್ಮಾಣವಾ-
ಗುತ್ತಿತ್ತೊ ಏನೊ. ಆದರೆ ಅಂತಹ ಕೊಡುಕೊಳ್ಳುವಿಕೆಯ ವಾತಾವರಣ ಸೃಷ್ಟಿ
ಯಾಗಲೇ ಇಲ್ಲ. ಉರ್ದು ಭಾಷೆ ಮುಸ್ಲಿಮರ ಭಾಷೆ ಎಂದು ಹೆಸರು ಪಡೆದು
ಮುಸ್ಲಿಮೇತರರಿಗೆ ಅದು ಅಲರ್ಜಿ ಎಂಬಂತಾಯಿತು. ಉರ್ದು ಮತ್ತು ಅರೇಬಿಕ್
ಭಾಷೆಗಳೊಳಗಿನ ವ್ಯತ್ಯಾಸ ಕೂಡಾ ತಿಳಿಯದಂತಹ ಅಜ್ಞಾನ ಇವರದಾದರೆ, ಕನ್ನಡ
ಭಾಷೆ ಕಾಫಿರರ ಭಾಷೆ ಎನ್ನುತ್ತಾ ಅದನ್ನು ಕನಸಿನಲ್ಲೂ ಉಚ್ಚರಿಸಲಾರದ ಸ್ಥಿತಿ
ಉರ್ದು ಮಾತನಾಡುವ ಮುಸ್ಲಿಮರದಾಯಿತು. ಹೀಗಾಗಿ ಈ ಎರಡೂ ಭಾಷೆಗ-
ಳೊಳಗೆ ಬಾಂಧವ್ಯ ಚಿಗುರಲೇ ಇಲ್ಲ. ಇವರ ನಡುವಿನ ಕಂದಕ ದಿನದಿಂದ ದಿನಕ್ಕೆ
ಆಳವೂ ಅಗಲವೂ ಆಗುತ್ತಾ ನಡೆಯಿತು. ಅದನ್ನು ಇನ್ನಷ್ಟು ಅಗಲಗೊಳಿಸಲು
ಕೆಲವು ಧರ್ಮಾಂಧರಾದ ಮೂಲಭೂತವಾದಿಗಳು ಹಗಲಿರುಳೂ ಶ್ರಮಿಸಿದರು.
ಇದರ ಪರಿಣಾಮವನ್ನು ನಾವೆಲ್ಲರೂ ನೋಡುತ್ತಲೇ ಇದ್ದೇವೆ; ಮಾನವೀಯ
ಅನುಕಂಪವುಳ್ಳವರೆಲ್ಲರೂ ನೋವನ್ನನುಭವಿಸುತ್ತಲೇ ಇದ್ದೇವೆ. ದೇಶಾದ್ಯಂತ ಕೋಮು
ದ್ವೇಷದ ದಳ್ಳುರಿ ಹೊತ್ತಿ ಉರಿದು ದೇಶವನ್ನು ಸುಟ್ಟು ನಾಶ ಮಾಡುವ ಹಂತ
ತಲುಪಿದೆ. ಕಳೆದ ಸುಮಾರು 10 ಶತಮಾನಗಳಿಂದಲೂ ಈ ನೆಲದಲ್ಲಿಯೆ ಮೊಳೆತು
ಚಿಗುರಿ ಬೇರೂರಿದ ಈ ಮುಸ್ಲಿಂ ಸಮಾಜ ಇಂದು ಅನಾಥ ಪ್ರಜ್ಞೆಯಿಂದ ನರಳು
ವಂತಾಯಿತು. ಕೆಲವು ಧರ್ಮಾಂಧ ಸಂಘಟನೆಗಳು ಮತ್ತು ಧರ್ಮದ ಕುರಿತು
ಸಮನಾದ ತಿಳುವಳಿಕೆಯೇ ಇಲ್ಲದ ಧರ್ಮ ಗುರುಗಳು ಈ ಜನ ಸಮುದಾಯವನ್ನು
ಇನ್ನಷ್ಟು ಹಾದಿ ತಪ್ಪಿಸತೊಡಗಿದರು. ಸಾಹಿತ್ಯ ಕೃತಿ ರಚಿಸುವುದು, ಅವುಗಳನ್ನು
ಓದುವುದು, ಹಾಡು ಹೇಳುವುದೂ ಕೂಡಾ ಧರ್ಮ ವಿರೋಧಿ ಕ್ರಮವೆಂದು ಪ್ರಚಾರ
ಮಾಡಿ ಜನರು ಸಾಹಿತ್ಯ ಕೃತಿಗಳನ್ನು ಓದುವುದಕ್ಕೂ ತಡೆಯೊಡ್ಡಲಾರಂಭಿಸಿದರು.
'ಈ ಲೋಕದಲ್ಲಿ ಏನನ್ನೂ ಇಚ್ಚಿಸಬೇಡಿ. ನಿಮಗೆ ಎಲ್ಲವೂ 'ಅಲ್ಲಿ' ಯೇ ಇದೆ.
ಅಲ್ಲಿಗೆ ಹೋಗಲು ಸಿದ್ಧರಾಗಿ' ಎಂದು ಹಗಲಿರುಳೂ ಕೊರೆಯಲಾರಂಭಿಸಿದ ಪರಿಣಾ
ಮವಾಗಿ, ಈ ಮುಗ್ಧ ಜನರು ಈ ದೇಶದ ಸಾರ್ವಜನಿಕ ಬದುಕಿನಿಂದ ಅಥವಾ
ಇನ್ನೊಂದು ಮಾತಿನಲ್ಲಿ ಹೇಳಬಹುದಾದರೆ ಈ ದೇಶದ ಮುಖ್ಯ ಪ್ರವಾಹದಿಂದ
ಬೇರ್ಪಡಿಸಲ್ಪಟ್ಟರು. ನಾವೆಲ್ಲರೂ ಕೇವಲ ಮಾನವ ಜೀವಿಗಳು. ನಮಗೆಲ್ಲರಿಗೂ

ನಮ್ಮದೇ ಆದ ಸಮಸ್ಯೆಗಳಿವೆ; ಈ ಸಮಸ್ಯೆಗಳಿಗೆ ನಾವೆಲ್ಲರೂ ಒಟ್ಟಾಗಿ ಸ್ಪಂದಿಸಬೇಕು. ಜಾತಿ, ಮತ, ಧರ್ಮಗಳು ನಮ್ಮ ಮನೆಯೊಳಗಿರಲಿ; ಮಸೀದಿ, ಚರ್ಚು ದೇವಸ್ಥಾನಗಳಲ್ಲಿರಲಿ. ಮನೆಯಿಂದ ಹೊರಗೆ, ಸಾರ್ವಜನಿಕ ಬದುಕಿನಲ್ಲಿ ನಾವೆಲ್ಲರೂ ಒಂದಾಗಿರೋಣ ಎಂಬಪಾಠ ಸಾಮಾನ್ಯ ಮುಸ್ಲಿಂ ಮಹಿಳೆಯರಿಗೆ ದೊರೆಯಲೇಇಲ್ಲ. ಹೀಗಾಗಿ ಸಾಹಿತ್ಯ ಕೃತಿಗಳ ಮೂಲಕ ಪರಸ್ಪರರ ಬದುಕಿನ ಪ್ರತಿಬಿಂಬವನ್ನು ಕಂಡುಕೊಂಡು ಪರಸ್ಪರರು ಸೌಹಾರ್ದಯುತ ವಾತಾವರಣದಲ್ಲಿ ನೆಮ್ಮದಿಯಿಂದ ಬದುಕಬಹುದಾಗಿದ್ದ ಈ ಸಮಾಜಗಳು ಇಂದು ಪರಸ್ಪರರಲ್ಲಿ ನಂಬಿಕೆ ಕಳೆದುಕೊಂಡು ದ್ವೇಷದ, ಕಿಚ್ಚಿನವಾತಾವರಣದಲ್ಲಿ ಬದುಕು ಸಾಗಿಸುವಂತಾಯಿತು. ಮಾತೆಯರೆಂದು ಕರೆಯುತ್ತಾ ಮಹಿಳೆಯರನ್ನು ಗೌರವಿಸಬೇಕೆನ್ನುವ ಅದೇ ಜನರು ಎಲ್ಲರೆದುರಿಗೆ ಮಾನಭಂಗಕ್ಕೊಳಿದರು.

ಈಗಲೂ ಕಾಲ ಮಿಂಚಿಲ್ಲ ಎಂಬುದು ನನ ಭಾವನೆ. ಈ ನೆಲದ ಭಾಷೆಯನ್ನು ಮೈಗೂಡಿಸಿಕೊಂಡು ಅದರಲ್ಲಿ ನನ್ನ ಸಮಾಜದ ಮಹಿಳೆಯರ ಶೋಷಣೆಯನ್ನು, ನನ್ನ ಸಮಾಜದ ಪ್ರತಿಬಿಂಬವನ್ನು ಜನರ ಮುಂದಿಟ್ಟಾಗ ನನಗೆ ದೊರೆತ ಸ್ವಾಗತ ನಮ್ಮ ಎಲ್ಲ ಕಪ್ಪು ಮೋಡಗಳಿಗೂ ಬೆಳ್ಳಿ ರೇಖೆಯೆಂದು ಕೊಂಡಿದ್ದೇನೆ. ನಾನು ನನ್ನ ಧರ್ಮವನ್ನು ಉಳಿಸಿಕೊಂಡೂ ನಿಮ್ಮಲ್ಲಿ ಒಬ್ಬಳಾಗಿ ನಾವು ಪರಸ್ಪರರನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿರುವುದು, ಬರಲಿರುವ ದಿನಗಳು ಅಷ್ಟೊಂದು ಕರಾಳವಾಗಿರಲಾರವು ಎಂಬ ವಿಶ್ವಾಸವನ್ನು ನನ್ನಲ್ಲಿ ಮೂಡಿಸುತ್ತಿದೆ. ನಮ್ಮ ನಡುವಿನ ಈ ಮುಳ್ಳು ಬೇಲಿಯನ್ನು ಸರಿಸಲು ಅಥವಾ ಈ ಅಡ್ಡಗೋಡೆಯನ್ನು ಕೆಡವಲು ನನಗೆ ಸಾಧ್ಯವಾಗಿರುವುದು ಸಾಹಿತ್ಯದಿಂದ ಮಾತ್ರ. ಬಹುಶಃ ನಾನು ಇಂದು ಸಾಹಿತ್ಯ ರಚನೆಗೆ ಕೈ ಹಾಕದಿರುತ್ತಿದ್ದರೆ ನಾನು ಮತ್ತು ನಮ್ಮ ಇಡೀ ಸಮಾಜ ಕಳೆದುಕೊಳ್ಳುವುದು ಎಷ್ಟಾಗುತ್ತಿತ್ತು ಏನೆಲ್ಲವನ್ನೂ ಕಳೆದು ಎಂಬ ಯೋಜನೆ ಹಲವುಬಾರಿ ನನ್ನನ್ನು ಕಾಡಿದ್ದಿದೆ. ಅಥವಾ ನನ್ನಂತೆಯೇ ಇನ್ನೂ ಹಲವಾರು ಮುಸ್ಲಿಂ ಮಹಿಳೆಯರು ಮುಂದೆ ಬಂದು ಇಲ್ಲಿನ ಬಹು ಸಂಖ್ಯಾತರೊಡನೆ ಬೆರೆತು ಅವರ ನೋವು ನಲಿವುಗಳಲ್ಲಿ ಭಾಗಿಯಾಗಲು ತಮ್ಮ ನೋವು ನಲಿವುಗಳನ್ನು ಹಂಚಿಕೊಳ್ಳಲು ಪ್ರಯತ್ನಿಸುತ್ತಿದ್ದರೆ ಈ ದೇಶ ಇಂದು ಈ ರೀತಿ ಹೊತ್ತಿಕೊಂಡು ಉರಿಯುತ್ತಿರಲಿಲ್ಲವೇನೊ ಎಂಬ ಅನಿಸಿಕೆ ಕೂಡ ನನ್ನನ್ನು ಕಾಡಿದ್ದಿದೆ.

ಲೇಖಕಿಯರ ಸಮಸ್ಯೆಗಳ ಕುರಿತು ನಾನು ಹೇಳುವುದು ಹೆಚ್ಚೇನೂ ಉಳಿದಿಲ್ಲ. ಲೇಖಕೀಯರ ಕೃತಿಗಳನ್ನು ಪ್ರತ್ಯೇಕವಾಗಿ ಮೌಲ್ಯ ಮಾಪನ ಮಾಡಬೇಕೆ, ಲೇಖಕಿಯರಿಗೆ ಮೀಸಲಾತಿ ಬೇಕೆ ಎಂಬ ಪ್ರಶ್ನೆ ಕೇಳಿ ಬರುತ್ತಿದೆ. ಮಹಿಳಾ ಸಾಕ್ಷರತೆ ಇನ್ನೂ ಶೇಕಡಾ 40ನ್ನು ಮೀರಿಲ್ಲ. ಇದು ಕೇವಲ ಸಾಕ್ಷರತೆಯ ಪ್ರಮಾಣ. ಇವರಲ್ಲಿ ಪ್ರೌಢ ಶಿಕ್ಷಣ ಮುಗಿಸಿದ ಮಹಿಳೆಯರ ಪ್ರಮಾಣ ಎಷ್ಟಿರಬಹುದು ಎಂಬುದನ್ನು



ಊಹಿಸಲು ಭಯವಾಗುತ್ತದೆ. ಮಹಿಳಾ ವಿದ್ಯಾಭ್ಯಾಸದ ಮಟ್ಟ ಇಷ್ಟೊಂದು ಕೆಳಮಟ್ಟದಲ್ಲಿದ್ದರೂ ಪುರುಷರ ಕೃತಿಗಳಿಗೆ ಸಂಗಟ್ಟಬಲ್ಲ ಸಾಹಿತ್ಯ ಕೃತಿ ರಚಿಸಿದ ಕೆಲವು ಜನ ಮಹಿಳೆಯರಾದರೂ ನಮ್ಮಲ್ಲಿದ್ದಾರೆ. ಮುಸ್ಲಿಂ ಮಹಿಳೆಯರ ಸಾಕ್ಷರತೆ ಕೇವಲ ಶೇಕಡಾ 11 ಆದರೂ ಅವರಲ್ಲೂ ಓರ್ವ ಮಹಿಳೆ ಜ್ಞಾನಪೀಠ ಪ್ರಶಸ್ತಿ ಪಡೆದಿದ್ದಾರೆ. ನೋಬಲ್ ಪಾರಿತೋಷಕ ಪಡೆದ ವಿದೇಶಿ ಮಹಿಳೆಯರಿದ್ದಾರೆ. ಇವೆಲ್ಲ ಏನನ್ನು ಸೂಚಿಸುತ್ತದೆ? ಮಹಿಳೆಯರಿಗೆ ಸಮನಾದ ಅವಕಾಶ ದೊರೆತಾಗ ಅವರೂ ಕೂಡಾ ಪುರುಷರಿಗೆ ಸರಿಸಮನಾಗಿ ಮಿಂಚಬಲ್ಲರು ಎಂಬದು ಇದರಿಂದ ವ್ಯಕ್ತವಾಗುವುದಿಲ್ಲವೇ? ಸ್ವತಂತ್ರರಾಗಿ ದೇಶ ವಿದೇಶಗಳಲ್ಲಿ ಸಂಚರಿಸಿ ಅನುಭವಗಳಿಸಿಕೊಳ್ಳಲು ಬೇಕಾದ ಸ್ವಾತಂತ್ರ್ಯ, ಆರ್ಥಿಕ ಅನುಕೂಲತೆ, ಶಿಕ್ಷಣ ಎಲ್ಲವೂ ಇದ್ದರೆ ನಮ್ಮ ಕನ್ನಡ ಮಹಿಳೆಯರೂ ಕೂಡಾ ಅತ್ಯುತ್ತಮ ಕೃತಿಗಳನ್ನು ರಚಿಸಬಲ್ಲರು; ಜ್ಞಾನಪೀಠ ಪ್ರಶಸ್ತಿಯನ್ನೂ ಪಡೆಯಬಲ್ಲರು. ಆದರೆ ಅಂತಹ ಸೌಲಭ್ಯ, ಅವಕಾಶ ಎಲ್ಲರಿಗೂ ಒದಗಿ ಬರುವವರೆಗೆ, ಪುರಷರೊಡನೆ ಸರಿಸಮನಾಗಿ ಸ್ಪರ್ಧಿಸಲು ಸಾಧ್ಯವಾಗುವವರೆಗೆ ಮಹಿಳೆಯರಿಗೆ ಮೀಸಲಾತಿ ಬೇಕೆ ಬೇಕು ಎಂಬುದು ನನ್ನ ಅಭಿಪ್ರಾಯ.

ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ನಮ್ಮ ಮಹಿಳೆಯರು ಎಷ್ಟೊಂದು ಅಸಹಾಯಕರಾಗಿದ್ದಾರೆ ಎಂಬುದಕ್ಕೆ ಒಂದೆರಡು ಉದಾಹರಣೆ ನೀಡುವೆ. ನಮ್ಮ ಕರಾವಳಿ ಲೇಖಕಿಯರ ಸಂಘದ ಒಂದು ಗೋಷ್ಠಿಗೆ ಲೇಖಕಿಯೊಬ್ಬರು ಅಧ್ಯಕ್ಷ ಸ್ಥಾನವನ್ನು ವಹಿಸಿಕೊಳ್ಳಲು ಒಪ್ಪಿಕೊಂಡಿದ್ದರು. ಆದರೆ ಆ ಗೋಷ್ಠಿಯ ದಿನ ಇವರು ಬರಲಾಗಲಿಲ್ಲ; ಕಾರಣ ಅದೇ ದಿನ ಅವರ ಮಗಳಿಗೆ ಹೆರಿಗೆಯಾಗಿತ್ತು. ಸಂಸಾರ ಬಂಧನದ ಬಲೆಯಿಂದ ಬಿಡಿಸಿಕೊಳ್ಳಲಾಗದ ಕಾರಣಕ್ಕಾಗಿಯೇ ನನ್ನಿಂದ ಇತ್ತೀಚಿಗೆ ಏನೂ ಬರೆಯಲಾಗಲಿಲ್ಲ. ಓರ್ವ ಪುರುಷ ಲೇಖಕನಿಗೆ ಇಂತಹ ಯಾವ ಸಮಸ್ಯೆಗಳೂ ಇರುವುದಿಲ್ಲ. ಮತ್ತು ಆತನ ಬೇಕು ಬೇಡಗಳನ್ನು ನೋಡಿಕೊಂಡು ಆತನ ಅವಶ್ಯಕತೆಗಳನ್ನು ಪೂರೈಸಲು ಹೆಂಡತಿಯೊಬ್ಬಳಿರುತ್ತಾಳೆ ಇದನ್ನು ಶಕುಂತಲಾ ನರಸಿಂಹನ್ ತಮ್ಮ ಒಂದು ಲೇಖನದಲ್ಲಿ ಸೊಗಸಾಗಿ ವಿವರಿಸಿದ್ದಾರೆ. ಹೀಗೆ ಎಲ್ಲ ಜವಾಬ್ದಾರಿಗಳಿಂದ ಮುಕ್ತರಾಗಿ, ಸಾಕಷ್ಟು ಆರ್ಥಿಕ ಅನುಕೂಲತೆ ಇದ್ದು ಹೆಂಡತಿತೆ ಬದಲಾಗಿ ಓರ್ವ ಸಹಾಯಕಿಯನ್ನಾದರೂ ಇಟ್ಟುಕೊಂಡು ವಿದೇಶ ಬಿಡಿ ದೇಶಾದ್ಯಂತ ಸಂಚರಿಸಿ ಅನುಭವಗಳಿಸುವ ಅವಕಾಶವಿದ್ದರೇನೇ ನಾವು ಎಷ್ಟೊ ಉತ್ತಮ ಕೃತಿಗಳನ್ನು ರಚಿಸಬಲ್ಲೆವು ಎನ್ನಿಸುತ್ತದೆ. ಅಂದರೆ ನಮ್ಮ ಮಹಿಳೆಯರಿಗಾರಿಗೂ ಇಂತಹ ಸೌಲಭ್ಯಗಳಿವೇ ಇಲ್ಲವೆಂದಲ್ಲ ಎಷ್ಟೋ ಮಹಿಳೆಯರಿಗೆ ಇಂತಹ ಎಲ್ಲ ಅನುಕೂಲಗಳೂ ಇರುತ್ತವೆ. ಆದರೆ ಅಂತಹವರಿಗೆ ಸಾಹಿತ್ಯದ ಗಂಧವೂ ಇರುವುದಿಲ್ಲ. ಎಲ್ಲಿ ಏನು ಇರಬೇಕಾಗಿತ್ತೊ ಅದು ಅಲ್ಲಿರದೆ ಬೇರೆ ಇನ್ನೆಲ್ಲೊ ಇರುತ್ತದೆ. ಇದನ್ನು ಮಾತ್ರ ನಾವು ಯಾವ ರೀತಿಯಲ್ಲೂ ಸರಿಪಡಿಸುವಂತಿಲ್ಲ.

(ಸೌಜನ್ಯ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ-583211)

# ಬಸವತತ್ತ್ವ ರತ್ನಾಕರ—23

## (ವಚನ ಕಾವ್ಯಸುಧಾಸಾಗರ)

-- ಶ್ರೀ ಮೋಟಗಿ ಮಲ್ಲಿಕಾರ್ಜುನ 'ಕನ್ನಡ ಕವಿ ಕಾಳಿದಾಸ', ಅಥಣಿ-591304(ಬೆಳಗಾವಿ ಜಿಲ್ಲೆ)

### 211 ವೀರಶೈವ ಧರ್ಮ ಸಿಂಧು

ಸ್ವಾತ್ಮಸೃಷ್ಟಿ :– ಯಾವ ಭಕ್ತನ ಹೃದಯ ಸಮುದ್ರದಲ್ಲಿ ಭಗವದ್ಭಕ್ತಿಯ
ಅಲೆಗಳೂ ಜ್ಞಾನ ಶಕ್ತಿಯ ತೆರೆಗಳೂ ಏಳುತ್ತಲಿವೆಯೊ
ಅಂತಹ ಪವಿತ್ರ ಹೃದಯ ಸಾಗರದ ತಳದಲ್ಲಿ
ಶಾಂತಿಯು ತಾನಾಗಿಯೆ ಚಿರಸ್ಥಾಯಿಯಾಗಿರುತ್ತದೆ ನೋಡಾ !
ಈ ಅನುಭಾವಿ ಸಂತ ಹೃದಯ ವಾರಿಧಿಯ ಮಧ್ಯದಲ್ಲಿ
ಈಶ್ವರನು ನಿತ್ಯ ವಾಸವಾಗಿ, ಶೇಷಶಾಯಿಯಾದ
ಆ ನಾರಾಯಣನು ಪರಿಶೋಭಿಸುವಂತೆ,
ಕಂಗೊಳಿಸುತ್ತಲಿರುವನು; ನಲಿಯುತ್ತಲಿರುವನು ನೋಡಾ !
ಇಂತಹ ಮಹಾತ್ಮರ ದಿವ್ಯದೃಷ್ಟಿಯಲ್ಲಿ ಜಗತ್ತಿನ ಯಾವ
ಕ್ರೂರ ಮಾನವನೂ ಕೂಡ ಪರಕೀಯನಾಗಿ ತೋರುವುದಿಲ್ಲ ನೋಡಾ!
ಎಲ್ಲವೂ ಸ್ವಾತ್ಮಸೃಷ್ಟಿಯ ಅಲೌಕಿಕ ಪ್ರತೀಕಗಳಾಗಿಯೆ ಕಾಣಿಸುತ್ತಿವೆ ನೋಡಾ!
ಆತ್ಮಸೂರ್ಯನ ಕಿರಣಗಳಂತೆಯೆ ಅಲ್ಲಿ ದೃಗ್ಗೋಚರವಾಗುತ್ತಲಿವೆ ನೋಡಾ
ಹೇಗೆ ಮಹತ್ತಾದ ಕಡಲು ಮುತ್ತುಗಳ ಆಶ್ರಯಸ್ಥಾನವಾಗಿದ್ದರೂ ಸಹ
ಸರ್ಪ, ಮೀನು, ಮೊಸಳೆ ಮೊದಲಾದ ಕ್ರೂರ ಜಂತುಗಳಿಗೆ ಆಶ್ರಯ ವಿತ್ತಿರುವಂತೆ
ಮಹಾತ್ಮರೂ ಕೂಡ, ಪಾಪಿ ಕೋಪಿಗಳನ್ನೂ ದುರ್ಜನರನ್ನೂ
ಭೇದ ಬುದ್ಧಿಯಿಂದ ಎಣಿಸದೆ, ಭಿನ್ನದೃಷ್ಟಿಯಿಂದ ಕಾಣದೆ
ಸ್ವಾತ್ಮ ದೃಷ್ಟಿಯಿಂದಲೆ ಕಂಡು ಕರುಣಿಸುವರು ನೋಡಾ
ಸ್ವಾತ್ಮ ಸೃಷ್ಟಿಯಲ್ಲಿ ಎಲ್ಲವೂ ತಾನೆ ಕಾಣಾ ! ಶ್ರೀ ಶೈಲಮಲ್ಲಿಕಾರ್ಜುನ!

### ಸೃಷ್ಟಿಕರ್ತನ ಉಪಕಾರ ಸ್ಮರಣೆ 212

ಎಷ್ಟು ಪೊಗಳಲಿನ್ನೆಷ್ಟು ಬಣ್ಣಿಸಲಿನಾನು
ಸೃಷ್ಟಿಕರ್ತ ನಿನ್ನುಪಕಾರವನು
ಕಷ್ಟ ಬಡದವೋಲೆಮಗದೃಷ್ಟದಯದಿ ನೀನು
ಸೃಷ್ಟಿಸಿಕೊಟ್ಟೆ ದೇವ ಎಲ್ಲವನು !

ಸ್ವಾಮಿ! ನೀನಾಗಸದಿ ಬೋದಿಗೆಗಳಿಲ್ಲದೆ ರವಿ-ಶಶಿಗಳ ನಿರಿಸಿದೆ ತವಲೀಲಾ ಮಾತ್ರದಿಂ
ಭೂವ್ಯಾಕಾಶಂಗಳನೆಲ್ಲ ಸೊಗದಿ ಬೆಳದಿಂಗಳು ಮೇಣ್ ರವಿಕಿರಣಗಳಿಂ ಬೆಳಗಿಪಂತೆಮಾಡಿದೆ



ಸಲೆ ಸಪ್ತಸಾಗರಂಗಳನಿತ್ತು ಜಗದ ಮನುಕುಲಕೆ-ಪ್ರಾಣಿಕೋಟಿಗೆ ಸಲಿಲವಾಗಿಸಿದೆ !
ಹೊಳೆ ಹಳ್ಳಗಳ ತುಂಬಿಹರಿಸಿ ಮೇಘ ಮಂಡಲದಿಂ ಅತುಲ ನಿಸರ್ಗಸಿರಿಯ ಕರುಣಿಸಿದೆ
ಧರೆಯ ನೀರೊಳಗಿರಿಸಿದೆ ಕರಗದಂತೆ ಬಾನೊಳಿರಿಸಿದೆ ತಾರೆಗಳ ಮಿನುಗುವಂತೆ
ಸರಸಿಯೊಳಿರಿಸಿದೆ ಸುಮನೋಹರ ಕಮಲ ಪತ್ರಂಗಳ ಕಂಗೊಳಿಪಂತೆ
ಕರಿ-ಕರಡಿ ಸಿಂಹ, ಶಾರ್ದೂಲ, ಹುಲಿ, ಹುಲ್ಲೆ, ಹಂಸ, ನವಿಲು, ಗರುಡ, ಚಾತಕದಂತೆ
ಸರಗೆಯ್ವ ಕೋಗಿಲೆ, ಗಿಳಿ, ಕಾಗೆ, ಹಕ್ಕಿಹಾಡುವ ಪಕ್ಷಿಗಳ ಸೃಷ್ಟಿಸಿದೆ ಜಗಹರ್ಷಿಪಂತೆ
ಉರಗ ಭೂಷಣನಾಗಿ ನಾಗಲೋಕವ ರಚಿಸಿ ಸರ್ಪಸಂಕುಳವಿತ್ತೆ
ಗಿರಿಜೆ-ಕರಿಮುಖ ಸಹಿತ ನಂದಿವಾಹನನಾಗಿ ಗೋವು, ನಂದಿ, ನರಕೋಟಿ
ಮೇಣ್ ಸುರಾಸುರ ಕೋಟಿಗಳನಿತ್ತೆ
ತುರಗ-ಕುರಿ-ಟಗರು-ಆಡು, ಹೋತ, ಮಹಿಷ, ಕೋಣಂಗಳನಿತ್ತೆ !
ಹರಿ-ಹರ-ಬ್ರಹ್ಮರನು ಪುಟ್ಟಿಸಿ ಮೂಜಗನೋಳ್ಪಂತೆ ಮಾಡಿ, ಯಮಧರ್ಮಂಗೆ
ಮೊದಲ್ ತವೆ "ಶಿವಶಾಸನ"ವನಿತ್ತೆ
ತೋಳ-ಸಾರಂಗ-ನೀರಾನೆ-ತಿಮಿಂಗಲು, ಮೊಸಳೆ, ಮೀನು ಕೋಳಿ, ಹುಂಜ, ಒಂಟೆ, ಕತ್ತೆ, ಹಂದಿ, ನಾಯಿ,
ಮರ್ಕಟ-ಮೇಣ್ ಸಾಲು ಇರುವೆ ಮೊದಲ್ ಚೌರಾಶೀತ ಲಕ್ಷ ಜೀವರಾಶಿಗಳ ಸೃಷ್ಟಿಸಿದೆ
ಭಾಳಲೋಚನನೆ ತವ ಲೀಲಾವಿಲಾಸದಿಂದಾಯಿತ್ತಿನಿಲೆಲ್ಲ ಈ ಅನಂತಾನಂತ ವೈಭವ ವಿಶ್ವಬ್ರಹ್ಮಾಂಡ !

ಈಳೆ, ನಿಂಬೆ, ಮಾವು, ಮೊದಲ ಫಲಂಗಳಲ್ಲಿ–ಸಿಹಿ
ಹುಳಿಯ ನಿರಿಸಿದವರಾರಯ್ಯಾ ? ಸಕಲಕಾರಣ ಪರಶಿವ
ಪರವಸ್ತು ನೀನೆಯಲ್ತೆ? ಆದಡುಂ ಮತ್ತೆ ನೀನಿರಾಕಾರ! ನಿರಂಜನ
ನಿತ್ಯ ಸಚ್ಚಿದಾನಂದ ಸ್ವರೂಪಿ-ಸರ್ವವೂ ನೀವೆಯಲ್ತೆ? ಸಾಕಾರವೂ ಸಹಿತ!
ಮತ್ತೆ ಬಾಳೆ, ಕಬ್ಬು, ಹಲಸು, ತೆಂಗು, ಖರ್ಜೂರ, ದ್ರಾಕ್ಷ ಫಲಂಗಳಲ್ಲಿ ಸಿಹಿಯ ನಿರಿಸಿದವರಾರಯ್ಯಾ ?
ಮಲ್ಲಿಗೆ, ಸಂಪಿಗೆ, ಜಾಜಿ, ಗುಲಾಬಿ, ದಾಸವಾಳ, ಕುಸುಮಂಗಳಲ್ಲಿ ಪರಿಮಳವ ನಿರಿಸಿದವರಾರಯ್ಯಾ !
ಶೂಲಪಾಣಿಯೆ ತನ್ನ ಲೀಲೆ ಅಧ್ಭುತ ಉಪಮಾತೀತ! 'ನೀಜಾಣರ ಜಾಣ, ಅಪ್ರತಿಮ! ಅಪ್ರಮಾಣ ನೋಡಯ್ಯಾ !

ನಿನ್ನ ಮಹಿಮೆಯನುಸುರಲೆನಗಸದಳವಯ್ಯಾ !
ನಿನ್ನ ಪರಾಪ್ರಕೃತಿ ಪ್ರಭೆಯನು ತೋರಲೆನಗಸಾಧ್ಯವಯ್ಯಾ !
ನಿನ್ನ ಶಕ್ತಿ ಸೌಭದ್ರೆಯನು ಬಣ್ಣಿಸಲಸದಳವಯ್ಯಾ !
ನಿನ್ನ ಭಕ್ತಿಯೊಂದೇ ಸಾಕು ಎನಗೆ ಮಹಾದಾನಿ ಕರುಣಿಸಯ್ಯಾ !
ಶ್ರೀಶೈಲಮಲ್ಲಿಕಾರ್ಜುನ !"

**ಭಕ್ತಿಯ ಹಿರಿಮೆ : [213]**

"ವೇದಂಗಳು ನುತಿಸಿ ನಿನ್ನ ಕಾಣದೆ ಹೋದುವಯ್ಯಾ !
ನಾದಂಗಳು ಹಾಡಿ ನಿನ್ನ ಕಾಣದೆ ಹೋದುವಯ್ಯಾ !
ವೇದವನೋದಿದ ಬ್ರಹ್ಮನ ಶಿರವೆ ಹೋಯಿತ್ತಯ್ಯಾ !
ನಾದವ ಮಾಡಿದ ರಾವಣನ ಆಯುಷ್ಯವೆ ಅರ್ಧ ಹೋಯಿತ್ತಯ್ಯಾ !
ವೇದಪ್ರಿಯನೂ ಅಲ್ಲ ! ನಾದಪ್ರಿಯನೂ ಅಲ್ಲ !
ಭಕ್ತಿಪ್ರಿಯ ನಮ್ಮ ಶ್ರೀಶೈಲಮಲ್ಲಿಕಾರ್ಜುನದೇವ !

**ಪ್ರಾರಬ್ಧತೆಯ ನಿವಾರಣೆ : [214]**

"ಅಗ್ನಿಯ ಸೋಂಕಲೊಡನೆ ಚಿನ್ನದ ಕಾಳಿಕೆ ಹೋಯಿತ್ತು !
ಜಲದ ಸೋಂಕಲೊಡನೆ ದೇಹದ ಮಲಿನತೆ ಹೋಯಿತ್ತು !
ಗಂಗೆಯ ಸೋಂಕಲೊಡನೆ ಪಾಪ ನಾಶವಾಗಿ ಹೋಯಿತ್ತು !
ನಮ್ಮ ಶ್ರೀಶೈಲಮಲ್ಲಿಕಾರ್ಜುನನೆಂಬ ಲಿಂಗವ ಸೋಂಕಲೊಡನೆ
ಪ್ರಾರಬ್ಧತ್ರಯ ನಿವಾರಣೆಯಾಗಿ ಹೋಯಿತ್ತು !

**ನಿಮ್ಮ ಪೂಜಿಸದೆ ಬಿಡೆನು : [215]**

"ನೀನೊಲಿದರೆ ಒಲಿಯಲಿ, ಇಲ್ಲದಿರೆ ಬಿಡಲಿ !
ನಿಮ್ಮ ಪೂಜಿಸದೆ-ನೆನೆಯದೆ ಆನು ಬಿಡೆನಯ್ಯಾ !
ನಿಮ್ಮ ಭಕ್ತಿ ಸಾಹಿತ್ಯದಾಸೋಹವ ಬಿಡೆನಯ್ಯಾ !
ಎನ್ನ ಮಾನಾಪ ಮಾನಂಗಳ ಹೊಣೆ ನಿಮ್ಮದು ನೋಡಯ್ಯಾ !
ಎಲೆ, ಶ್ರೀಶೈಲಮಲ್ಲಿಕಾರ್ಜುನನೆಂಬ ಮದಿಪ್ಪಲಿಂಗದೇವ !"

**ಅನುಭಾವರತ್ನ : [216]**

"ದೇಹವೆಂಬ ಪ್ರಣವದ ಪ್ರಣತೆಯಲ್ಲಿ,
ಶಿವಭಕ್ತಿಯೆಂಬ ತೈಲವನೆರೆದು,
ಸದಾಚಾರವೆಂಬ ಜ್ಯೋತಿಯ ಮುಟ್ಟಿಸಲು,
ದಿವ್ಯ ಜ್ಞಾನಾನುಭವ ರತ್ನವೆಂಬ
ಪರಂಜ್ಯೋತಿ ಬೆಳಗುತಿದ್ದಿತು ನೋಡಾ !
ಶ್ರೀಶೈಲಮಲ್ಲಿಕಾರ್ಜುನ !"

**ಜ್ಞಾನಸಂಪತ್ : [217]**

ಪುರುಷಾನ್ನ ಪರಂ ಕಿಂಚಿತ್,
ಸಾಕಾಷ್ಠಾ ಸಾಪರಾಗತಿಃ । ಎಂದುದಾಗಿ



ಅಪರವು ಜ್ಞಾನವೇ ಪರಮು ಪುರುಷ ಕಂಡಯ್ಯಾ !
ಅದಕ್ಕಿಂತ ಮಿಗಿಲಾದುದಿಲ್ಲ; ಅದೇ ಪರಮಗತಿ;
ಪರಮು ಮುಕ್ತಿ ನೋಡಾ !
ಶ್ರೀಶೈಲಮಲ್ಲಿಕಾರ್ಜುನ !"

**ಜ್ಞಾನಾ ಜ್ಞಾನ : [218]**

"ಲೋಕದಲ್ಲಿ ಮಾನವನಿಗೆ ಅಜ್ಞಾನಕ್ಕಿಂತ
ಹೆಚ್ಚಿನ ಬಡತನ ಬೇರೊಂದಿಲ್ಲ ನೋಡಾ !
ಜ್ಞಾನಕ್ಕಿಂತ ಹೆಚ್ಚಿನ ಸಿರಿತನ ಬೇರೊಂದಿಲ್ಲ ನೋಡಾ !
ಶ್ರೀಶೈಲಮಲ್ಲಿಕಾರ್ಜುನ

**ವಾಗದ್ವೈತಿ : [219]**

"ವಾಗದ್ವೈತಿಯೆಂದಡೆ ಬರೀ ಮಾತಿನ ಅದ್ವೈತಿ.
ಆತ ನುಡಿವನಲ್ಲದೆ ನಡೆವನಲ್ಲ ನೋಡಾ !
ಸದ್ಧರ್ಮಾಚರಣೆಯ ಸದ್ಭಕ್ತಿಯಿಲ್ಲದೆ,
ಅರಿವು ಅನುಭವವಿಲ್ಲದೆ, ಸತ್ಯಾಸತ್ಯನಿರ್ಣಯವಿಲ್ಲದೆ
ತಾ ಬರಿಯ 'ಅಹಂಬ್ರಹ್ಮಾಸ್ಮಿ' ಎಂದು ಹೇಳಿಕೊಂಡಡೆ,
ಈತನೆಂದಾದರೂ ಬ್ರಹ್ಮನಪ್ಪನೇನಯ್ಯಾ?
ಬರೀ ಬೊಮ್ಮದ ಮಾತು ಬಾಳಿಗೆ ತೊಡಕು.
ಭವದ ಕೋಟಲೆಯ ಕಾಟ ! ಕಂಡಯ್ಯ !
ಶ್ರೀಶೈಲಮಲ್ಲಿಕಾರ್ಜುನ !"

**ನುಡಿದಂತೆ ನಡೆ : [220]**

"ನುಡಿದಂತೆ ನಡೆ ಇದೆ ಜನ್ಮಕಡೆ ಎಂದೊರೆದ
ಸದ್ಭಕ್ತರ ಬಾಳಿನ ಪರಿಯೆಂತೆಂದಡೆ, ಕೇಳು :
ಸದ್ವರ್ತನೆಯು ಜೀವಾತ್ಮನಿಗೆ ಆಗತ್ಯ ನೋಡಾ !
ಧರ್ಮಪಥದಲ್ಲಿ ನಡೆವುದೆ ನಿಜವಾದ ಧ್ಯೇಯವಾಗಿರುವುದರಿಂದ,
ಭಕ್ತಿಮಾನಸದಿಂ,ದಿಟವಾಗಿ ಜೀವಾತ್ಮನೆ ಧರ್ಮಿ ನೋಡಾ.
ದೇಹೇಂದ್ರಿಯಂಗಳಿಂದ ಇಂತಪ್ಪ ಸನ್ಮಾರ್ಗಗಾಮಿಗೆ ಧರ್ಮ ಸಾಧನೆ ಸಾಧ್ಯನೋಡಾ
ಧರ್ಮಿಯಾದ ಆತ್ಮನಿಗೆ ಬರಿ ನುಡಿ ಪ್ರಯೋಜನವಿಲ್ಲ ಕಂಡಯ್ಯ !
ನಡೆಯೆ ಆತ್ಮನ ನಿಜಧರ್ಮವಾಗಿಪ್ಪುದು.
ನುಡಿ ಪರಾಶಕ್ತಿಯ ಸ್ವರೂಪವಾಗಿಪ್ಪುದು.
ಇದು ಕಾರಣ ನಡೆನುಡಿಗಳೆರಡು
ಒಂದಾದವನೆ ಸದ್ಭಕ್ತ ಕಾಣಾ !
ಶ್ರೀ ಶೈಲ ಮಲ್ಲಿಕಾರ್ಜುನ !"

## ಕೈಲಾಸ ಪದ

"ಕೈಲಾಸ ಕೈಲಾಸವೆಂದು ಕಚ್ಚಾಡುವ ಅಣ್ಣಗಳಿರಾ ನೀವು ಕೇಳಿರಯ್ಯಾ
ಕೈಲಾಸವೆಂಬುದೊಂದು ಭೂಮಿಯೊಳಿರುವ
ಹಿಮದ ಹಾಳು ಬೆಟ್ಟಕಂಡಯ್ಯಾ !
ಅಲ್ಲಿರ್ಪ ಮುನಿಗಳೆಲ್ಲ ಜಗದ ಮರೆಯ ಜೀವಗಳ್ಳರು.
ಅಲ್ಲಿರ್ದ ಸೋಮಶೇಖರನು ಭೋಳಾಶಂಕರನು.
ಇದರ ಹಾಳು ಆಡಂಬರದ ಗೊಡವೆ ನಿಮಗೇಕಯ್ಯಾ ?
ಎಮ್ಮ ಶ್ರೀ ಬಸವಾದಿ ಪುರಾತನರ ಸದಾಚಾರ ಮಾರ್ಗದೊಳು ನಡೆದು,
ಲಿಂಗಾಂಗ ಸಾಮರಸ್ಯವ ತಿಳಿದು, ನಿಮ್ಮ ಪಾದ ಪದ್ಮದೊಳು
ಬಯಲಾದ ಪದವೆ ಕೈಲಾಸವಯ್ಯಾ ! ಶ್ರೀ ಶೈಲಮಲ್ಲಿಕಾರ್ಜುನ"

---

ಶಿವಭಕ್ತಿಯುಳ್ಳವಂಗೆ ಕಾಮ ಬೇಡ, ಕ್ರೋಧ ಬೇಡ, ಲೋಭ ಬೇಡ, ಮೋಹ ಬೇಡ, ಮದ ಬೇಡ, ಮತ್ಸರ ಬೇಡ. ಶಿವಭಕ್ತಿಯುಳ್ಳವಂಗೆ ಕಾಮ ಬೇಕು; ಕ್ರೋಧ ಬೇಕು, ಲೋಭ ಬೇಕು, ಮೋಹ ಬೇಕು, ಮದಬೇಕು, ಮತ್ಸರಬೇಕು. ಬೇಕೆಂಬುದಕ್ಕಾವ ಗುಣ? ಬೇಡೆಂಬುದಕ್ಕಾವ ಗುಣ ? ಕಾಮ ಬೇಕು ಲಿಂಗದಲ್ಲಿ. ಕ್ರೋಧ ಬೇಕು ಕರಣಂಗಳಲ್ಲಿ. ಲೋಭ ಪಾದೋದಕ ಪ್ರಸಾದದಲ್ಲಿ. ಮೋಹ ಬೇಕು ಗುರುಲಿಂಗಜಂಗಮದಲ್ಲಿ ಮದ ಬೇಕು ಶಿವಾಚಾರ ಘನವೆಂಬಲ್ಲಿ. ಮತ್ಸರ ಬೇಕು ಹೊನ್ನು ಹೆಣ್ಣು ಮಣ್ಣಿನಲ್ಲಿ. ಇಂತೀ ಷಡ್ಗುಣವಿರಬೇಕು. ಬೇಡೆಂಬುದಕ್ಕಾವಗುಣ? ಕಾಮ ಬೇಡ ಪರಸ್ತ್ರಿಯರಲ್ಲಿ. ಮದ ಬೇಡ ಶಿವಭಕ್ತರಲ್ಲಿ. ಕ್ರೋಧ ಬೇಡ ಗುರುವಿನಲ್ಲಿ ಲೋಭ ಬೇಡ ತನುಮನದಲ್ಲಿ. ಮೋಹ ಬೇಡ ಸಂಸಾರದಲ್ಲಿ. ಮದ ಬೇಡ ಶಿವಭಕ್ತರಲ್ಲಿ. ಮತ್ಸರ ಬೇಡ ಸಕಲ ಪ್ರಾಣಿಗಳಲ್ಲಿ. ಇಂತೀ ಷಡ್ವಿಧ ಗುಣವನರಿದು ಮರೆಯಬಲ್ಲಡೆ ಆತನ ಸದ್ಭಕ್ತ ಕಾಣಾ ಕೂಡಲ ಚೆನ್ನ ಸಂಗಮದೇವಾ.

- ಚೆನ್ನಬಸವಣ್ಣ.



"ಮಾಟಕೂಟ" ಎಂಬ ಮಾತ ಕೇಳಲಾಗದು, ಶಿವಾ ಶಿವಾ! ನಿಮ್ಮ ಭಕ್ತರಿಗೆ "ಮಾಡಿದೆ" ನೆನ್ನದಿರೆಂದು ಶ್ರೀ ಗುರುಲಿಂಗವು ಕೃಪೆಯ ಮಾಡಿದ ಕಾರಣ, ಅಲ್ಲಿ ಮಾಡುವವರೂ ಮಾಡಿಸಿ ಕೊಂಬವರೂ ನೀವೇ ಕೂಡಲಸಂಗಮದೇವಾ.

ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು, ಮರ್ಮವನರಿಯದ ಮಾಟ ಸುಯಿದಾನದ ಕೇಡು! ಬಂದ ಸಮಯೋಚಿತವನರಿಯದಿದ್ದರೆ ನಿಂದಿರಲೊಲ್ಲ ಕೂಡಲಸಂಗಮ ದೇವಾ.

—ಶ್ರೀ ಬಸವೇಶ್ವರ

## ಉಜ್ವಲ ತಾರೆಗೆ

**ಶ್ರೀ ಸ್ವಾಮಿ ವಿವೇಕಾನಂದ!**

ಶಾರದಾಜಡೆ, ನಂ.330, ಎಚ್.ಐ.ಜಿ, ಬಿ ಎಚ್ ಇ ಎಲ್, ಹೈದ್ರಾಬಾದ್-500032.

ನಿನ್ನ ಹೆಸರನುಸಿರುವುದೇ,
ನಮಗೊಂದು ಆನಂದ.
ಬೀಜದೊಳಗಡಗಿರ್ಪ ಮಹಾವೃಕ್ಷದಂತೆ,
ಅಣುವಿನೊಳು ಹುದುಗಿರ್ಪ ಪ್ರಜ್ವಲತೆಯಂತೆ,

ಅರ್ಥ ಗರ್ಭಿತ ನಿನ್ನ ನಾಮಧೇಯ.
"ವಿವೇಕವೇ ಶುದ್ಧಾನಂದದುಗಮಸ್ಥಾನ,
ವಿವೇಕ ವಿಲ್ಲದಾನಂದ ಉನ್ಮಾದಕೊಂದಾಹ್ವಾನ;

ಜಾಗ್ರತ ಭಾರತ ! ಸುಜಾಗ್ರತ !
ಎಂದುದ್ಗರಿಸಿತ್ತು ತವ ಸಿಂಹಘೋಷ !
ಕಡಲಾಚೆಯೂ ವೊಳಗಿತ್ತು ಆ ಸಂಘೋಷ !
ಭಾರತದ ಚೈತನ್ಯವೇ ವೈವೆತ್ತು ನಿಂತಂತೆ,
ನಿನ್ನ ದಿಟ್ಟ ನಿಲುವು !

ಹಿಮಾಚಲ ದಿಂದಿಳಿದ ನಿರ್ಝರಿಣಿಯಂತೆ,
ನಿನ್ನ ವಾಗ್ಧಾರೆ !

ಲೋಕ ಮೆಚ್ಚಿತು ನಿನ್ನ; ತಲೆದೂಗಿತು;
ಮಾನವ ಕುಲದ ಮುಕುಟ ಮಣಿ ನೀನೆಂದಿತು.

ಭಾರತ ನಭೋಮಂಡಲದ,
ಪರಮೋಜ್ವಲ ತಾರೆಯೇ !
ಶತಮಾನ ಸಂದಿಹುದು ನಿನಗೆಂದು
ಕಿರುಗಾಣ್ಕೆ ಅರ್ಪಿಸಿಹೆ ನಾನಿಂದು.



# ಕ್ಷೇತ್ರ ವಾರ್ತೆ

—ಹೆಚ್. ಬಿ. ಗಂಗಾಧರಯ್ಯ

### 45 ನೇ ಗಣರಾಜ್ಯ ದಿನಾಚರಣೆ

ಶ್ರೀ ಮಠದ ಸಂಯುಕ್ತ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಜನವರಿ-26 ಗಣರಾಜ್ಯ ದಿನಾಚರಣೆ ಆಚರಿಸಲಾಯಿತು. ಮುಖ್ಯ ಅತಿಥಿಯಾಗಿ ತುಮಕೂರು ಜಿಲ್ಲೆ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ಉಪನಿರ್ದೇಶಕರಾದ ಶ್ರೀ ಯು.ಎಸ್ ನೆಜ್ಜೂರ್ ಧ್ವಜಾರೋಹಣ ಮಾಡಿ ವಿದ್ಯಾಥಿಗಳ ಪಥ ಸಂಚಲನೆಯಲ್ಲಿ ವಂದನೆ ಸ್ವೀಕರಿಸಿದರು. ಅನಂತರ ಅವರು ಮಾತನಾಡಿ ನಮ್ಮ ಭಾರತದ ಸಂವಿಧಾನ ರಚನೆಯಾಗಿ ಕಾರ್ಯಾಚರಣೆಗೆ ಬಂದ ಐತಿಹಾಸಿಕ ದಿನವಾಗಿದೆ. ಜಾತ್ಯಾತೀತ ಮತ್ತು ಸಮಾನತೆಯ ಪ್ರತೀಕವಾಗಿರುವ ಭವ್ಯ ಸಂವಿಧಾನ ನಮ್ಮದು. ಆದಾಗ್ಯೂ ದೇಶದಲ್ಲಿನ ವಿಚ್ಛಿದ್ರಕಾರಕ ಶಕ್ತಿಗಳಿಂದಾಗಿ ಹಿಂಸೆ, ಶೋಷಣೆ, ಘರ್ಷಣೆ, ಅಶಾಂತಿ ಜನತೆಯನ್ನು ಸಂಕಷ್ಟಕ್ಕೆ ಸಿಲುಕಿಸಿದೆ. ಇದಕ್ಕೆ ಪರಿಹಾರ ಎಲ್ಲಾ ಧರ್ಮೀಯರೂ ಪ್ರೀತಿ ಸೌಹಾರ್ದತೆಯಿಂದ ರಾಷ್ಟ್ರದ ಏಕತೆ ಮತ್ತು ಭಾವೈಕತೆಯನ್ನು ಉಳಿಸಿ ಬೆಳೆಸಲು ಪಣತೊಡಬೇಕೆಂದು ಕರೆಯಿತ್ತರು.

ಅಧ್ಯಕ್ಷತೆ ವಹಿಸಿದ್ದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಸಂದೇಶ ನೀಡಿ ಇಂದು ಭಾರತೀಯರ ರಾಷ್ಟ್ರೀಯತೆಯನ್ನು. ವ್ಯಾಪನ ಮಾಡುವ ಶ್ರೇಷ್ಠ ಸ್ಮಾರಕ ದಿನವಾಗಿದೆ. ಸಂವಿಧಾನದ ತತ್ವಗಳು ರಾಷ್ಟ್ರನಾಯಕರಲ್ಲಿ ಆಚರಣೆಗೆ ಬರದೆ ರಾಷ್ಟ್ರ ದುಸ್ಥಿತಿಯಲ್ಲಿದೆ. ಜನತೆ ತಾಳ್ಮೆಯನ್ನು ಕಳೆದುಕೊಂಡು ಹೋರಾಟಕ್ಕೆ ಸನ್ನದ್ಧರಾಗುವ ಮುನ್ನ ಆತ್ಮಾವಲೋಕನ ಮಾಡಿಕೊಂಡು ಮಹಾತ್ಮಗಾಂಧಿಯವರ ಮಾರ್ಗದಲ್ಲಿ ಮುನ್ನಡೆಯ ಬೇಕೆಂದು ಹೇಳಿದರು.

ಸನಿವಾಸ ಶಿಕ್ಷಣ ಸಂಸ್ಥೆಗಳ ವಿದ್ಯಾರ್ಥಿಗಳು ಭಾರತದ ವೈವಿಧ್ಯವನ್ನು ಪ್ರತಿಬಿಂಬಿಸುವ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಟ್ಟರು. ಪ್ರಾರಂಭಕ್ಕೆ ಶ್ರೀ ಬಿ.ಪಿ. ಬಸವರಾಜು ಸ್ವಾಗತಿಸಿದರು. ಶ್ರೀ ಪಿ.ಆರ್. ಸೋಮಶೇಖರಯ್ಯ ವಂದಿಸಿದರ ಶ್ರೀ ಜಿ. ಹೆಚ್. ಗಂಗಾಧರಯ್ಯ ಕಾರ್ಯಕ್ರಮ ನಿರೂಪಿಸಿದರು.

### ಸಂಸ್ಕೃತ ದಿನೋತ್ಸವ

ಜನವರಿ 28, 29 ಶ್ರೀ ಮಠದಲ್ಲಿ ವೇದ ಸಂಸ್ಕೃತ ಮಹಾಪಾಠಶಾಲೆ 77 ನೇ ಸಂಸ್ಕೃತ ದಿನೋತ್ಸವವನ್ನು ಆಚರಿಸಿತು. 28, ಶುಕ್ರವಾರ ಬೆಳಿಗ್ಗೆ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಧ್ವಜಾರೋಹಣ ಮಾಡಿದರು. ಮುಖ್ಯ ಬೀದಿಯಲ್ಲಿ ಸಾಮೂಹಿಕವಾಗಿ ಸಹಸ್ರ ಸಹಸ್ರ ವಿದ್ಯಾರ್ಥಿಗಳಿಂದ "ಜೀಯಾತ್ ಗೀರ್ವಾಣ ಭಾರತಿ" ಎಂಬ ಫಲಕ-ಘೋಷಣೆಗಳೊಂದಿಗೆ ಪಥ ಸಂಚಲನೆ ನಡೆಯಿತು.

ಅನಂತರ ಇದರ ಅಂಗವಾಗಿ ಶಾಕುಂತಲ ನಾಟಕದ ಸಮಗ್ರ ವಿಚಾರ ಸಂಕಿರಣ ಏರ್ಪಡಿಸಲಾಗಿತ್ತು. ಡಿ. ಐ. ಜಿ. ಶ್ರೀ ಡಿ. ಎನ್. ಮುನಿಕೃಷ್ಣ ಉದ್ಘಾಟಿಸಿದರು. ನಿವೃತ್ತ ಪ್ರಾಧ್ಯಾಪಕ ಶ್ರೀ ಲಕ್ಷ್ಮೀ ನರಸಿಂಹಭಟ್ಟ, ಪ್ರಾಚ್ಯ ಸಂಶೋಧನಾಲಯ, ಮೈಸೂರು ವಿ. ವಿ. ಶ್ರೀ ಟಿ.ವಿ. ಸತ್ಯನಾರಾಯಣ ಮತ್ತು ಶಂಕರ ಗಣಪತಿ ಫಾಟಕ್ ಉಪನ್ಯಾಸ ನೀಡಿದರು. ನಿವೃತ್ತ ಪ್ರಾಧ್ಯಾಪಕರಾದ ವಿದ್ವಾನ್ ಶ್ರೀ ಶೇಷಾಚಲಶರ್ಮ ಅಧ್ಯಕ್ಷತೆ ವಹಿಸಿದ್ದರು.

ಸಮಾರೋಪ ಸಮಾರಂಭ 29, ಜನವರಿ ಶನಿವಾರ ತ್ರಿವಿಧ ದಾಸೋಹ ಮೂರ್ತಿಗಳಾದ ಪೂಜ್ಯ ಶ್ರೀ ಶ್ರೀ ಗಳವರ ಸಾನ್ನಿಧ್ಯದಲ್ಲಿ ನೆರವೇರಿತು. ಆಶೀರ್ವಚನ ನೀಡುತ್ತಾ ಶ್ರೀ ಶೀ ಗಳು ಜಗತ್ತಿನ ಭಾಷೆಗಳಲ್ಲಿ ಸಂಸ್ಕೃತ ಮಾತೃಸ್ಥಾನ ಮತ್ತು ಉನ್ನತ ಸ್ಥಾನ ಪಡೆದಿದೆ. ಭರತ ಖಂಡದ ಸ್ವರೂಪ ಹಿನ್ನೆಲೆಯನ್ನು ಸಂಸ್ಕೃತ ದಿಂದ ತಿಳಿಯಬಹುದು. ಹಿರಿಮೆ, ಸಂಪತ್ತುಳ್ಳ ಸಂಸ್ಕೃತಿ ಪಡೆದಿರುವ ದೇಶ ನಮ್ಮದು. ವಚನ ಸಾಹಿತ್ಯಕ್ಕೆ ಸಂಸ್ಕೃತ ಮೂಲವಾಗಿದೆ. ವಿಶ್ವನಾಗರಿಕತೆಗೆ ಆಧ್ಯಾತ್ಮಿಕ ತಳಹದಿಯ ಮೇಲೆ ಸಂಸ್ಕೃತ ಪೋಷಕವಾಗುತ್ತದೆಂದು ನುಡಿದರು.

ಮುಖ್ಯ ಅತಿಥಿಯಾಗಿ ರಾಜ್ಯ ಉಚ್ಚನ್ಯಾಯಾಲಯದ ನ್ಯಾಯಾಧೀಶರಾದ ಶ್ರೀ ಶಿವರಾಜಪಾಟೀಲ್ ಮಾತನಾಡಿ ಸಂಸ್ಕೃತ ಭಾಷೆ ಪರಿಚಯವಿಲ್ಲ. ಆದರೆ ಅಭಿಮಾನವಿದೆ. ಎಲ್ಲಾ ಮಹೋನ್ನತ ಜ್ಞಾನ ಸಂಪತ್ತು ಸಂಸ್ಕೃತದಲ್ಲಿದೆ. ಇಲ್ಲಿ ಕಲಿಯುವ ಅವಕಾಶ ದೊರಕಿರುವುದು ಪುಣ್ಯದ ಫಲ. ಶ್ರದ್ಧಾ ಭಕ್ತಿಯಿಂದ ಅಭ್ಯಾಸ ಮಾಡಬೇಕೆಂದು ವಿದ್ಯಾರ್ಥಿಗಳಿಗೆ ಕರೆಯಿತ್ತರು.

ಪೂಜ್ಯ ಶ್ರೀ ಶ್ರೀ ಗಳು ಮತ್ತು ಶ್ರೀ ಮಠ ಜನತೆಯಲ್ಲಿ ಆಧ್ಯಾತ್ಮಿಕ ಜಾಗೃತಿ ಮಾಡುತ್ತಿದೆ. ಎಲ್ಲೂ ಕಾಣದ ಬೃಹತ್ ತ್ರಿವಿಧ ದಾಸೋಹ ಇಲ್ಲಿಯ ಪ್ರತಿಷ್ಠಾನವಾಗಿದೆ. ಇಷ್ಟು ದೊಡ್ಡ ಪ್ರಮಾಣದಲ್ಲಿ ಕೆಲಸ ಮಾಡಿರುವ ಮಹಾನ್ ವ್ಯಕ್ತಿಗಳು ಜಗತ್ತಿನ ಇತಿಹಾಸದಲ್ಲಿ ವಿರಳ. ಇದಕ್ಕೆ ಶ್ರೀ ಶ್ರೀ ಗಳೇ ಉದಾಹರಣೆ. ಮಾನವೀಯ ಮೌಲ್ಯಗಳಿಗೆ ಶ್ರೀ. ಮಠ ಕೇಂದ್ರವಾಗಿದೆ. "ಸಿದ್ಧಗಂಗೆ"ಯಲ್ಲಿ ನಾನು ಓದಿದ್ದರೆ ನನ್ನ ವ್ಯಕ್ತಿತ್ವ ಸರ್ವಾಂಗ ಸುಂದರವಾಗಿ ಬೆಳೆಯುತ್ತಿತ್ತು ಎಂದು ಅಭಿಮಾನದಿಂದ ನುಡಿದರು. ಇಲ್ಲಿ ಓದಿದ ವಿದ್ಯಾರ್ಥಿಗಳು, ಭಕ್ತಾದಿಗಳು, ಹಿತೈಷಿಗಳು, ನಾಡಿನ ಜನತೆ ಉದಾರವಾಗಿ ಸಮರ್ಪಣ ಭಾವದಿಂದ ಮೇರು ಕೃತಿಯ ಕಾರ್ಯಚಟುವಟಿಕೆಗಳಿಗೆ ನೆರವಾಗಬೇಕು. ಮಾತಿಗಿಂತ ಕೃತಿಲೇಸು. ಇದೇ ಶ್ರೀಮಠದ ಸಂದೇಶವಾಗಿದೆ ಎಂದು ಹೇಳಿದರು.



ತುಮಕೂರು ಜಿಲ್ಲಾ ಮತ್ತು ಸೆಷನ್ ನ್ಯಾಯಾಲಯದ ನ್ಯಾಯಾಧೀಶ ಶ್ರೀ ಎಲ್. ಅಗ್ನಿಹೋತ್ರಿ ಮಾತನಾಡಿ ಸಂಸ್ಕೃತ ಉತ್ಸವದಲ್ಲಿ ಉಪನ್ಯಾಸಕ್ಕಿಂತ ಹಾಡಿ, ಕುಣಿಯುವುದರ ಮೂಲಕ ಆಚರಿಸಬೇಕೆಂದು ಹೇಳಿ ಸಂಸ್ಕೃತದಲ್ಲಿ ದೇವತಾ ಸ್ತೋತ್ರಗಳನ್ನು ಹಾಡಿದರು.

ಪ್ರಾರಂಭಕ್ಕೆ ವಿದ್ವಾನ್ ಕೆ. ಬಸವರಾಜು ಸಂಸ್ಕೃತದ ಬಗ್ಗೆ ಪ್ರಾಸ್ತಾವಿಕ ವಿಷಯಗಳನ್ನು ಓದಿದರು. ನಿವೃತ್ತ ಪ್ರಾಧ್ಯಾಪಕ ಶ್ರೀ ಲಕ್ಷ್ಮೀನರಸಿಂಹಭಟ್ಟರು ಸಂಸ್ಕೃತದಲ್ಲಿ ಉಪನ್ಯಾಸ ನೀಡಿದರು. ಶ್ರೀ ಡಿ. ಎನ್. ಚಂದ್ರಶೇಖರಯ್ಯ ಸ್ವಾಗತಿಸಿದರು. ಶ್ರೀ ಪಿ. ಬಸವರಾಜು ವಂದಿಸಿದರು.

## ಕಾಲೇಜು ವಿದ್ಯಾರ್ಥಿಗಳ ವಾರ್ಷಿಕೋತ್ಸವ

ಶ್ರೀ ಮಠದ ಕಾಲೇಜು ವಿದ್ಯಾರ್ಥಿಗಳು ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸನ್ನಿಧಿಯಲ್ಲಿ 5-2-94 ವಾರ್ಷಿಕೋತ್ಸವ ಸಮಾರಂಭ ಏರ್ಪಡಿಸಿದ್ದರು. ಪೊಲೀಸ್ ಅಡಿಷನಲ್ ನಿರ್ದೇಶಕರಾದ ಡಾ|| ಕೆ. ಶ್ರೀನಿವಾಸನ್ ಐ. ಪಿ. ಎಸ್. ಮುಖ್ಯ ಅತಿಥಿಯಾಗಿ ಕ್ರೀಡಾ ಮತ್ತು ಸಾಹಿತ್ಯ ಚಟುವಟಿಕೆಗಳಲ್ಲಿ ವಿಜೇತರಾದವರಿಗೆ ಬಹುಮಾನಗಳನ್ನು ವಿತರಣೆ ಮಾಡಿದರು. ಅನಂತರ ಮಾತನಾಡಿ ಶ್ರೀ ಶ್ರೀಗಳವರ ಚರಣದಲ್ಲಿ ಸ್ವಲ್ಪ ಕಾಲಕಳೆಯುವ ಅವಕಾಶ ದೊರಕಿದ್ದು ಪುಣ್ಯದಫಲ. ಶ್ರೀ ಶ್ರೀಗಳವರ ಸಾಧನೆ ಬಹಳ ದೊಡ್ಡದು. ಅವರ ತ್ಯಾಗದ ಫಲವಾಗಿ ಲಕ್ಷಾಂತರ ವಿದ್ಯಾರ್ಥಿಗಳು ಭವಿಷ್ಯವನ್ನು ರೂಪಿಸಿಕೊಳ್ಳುತ್ತಿದ್ದಾರೆ ಶ್ರೀ ಶ್ರೀಗಳವರ ಸೇವಾಕಾರ್ಯದಲ್ಲಿ ವಿದ್ಯಾರ್ಥಿಗಳು ಸಮರ್ಪಣ ಭಾವದಿಂದ ಪಾಲ್ಗೊಳ್ಳಬೇಕು ಎಂದು ಹೇಳಿದರು.

ಅಧ್ಯಕ್ಷತೆ ವಹಿಸಿದ್ದ ರಾಜ್ಯ ಜನತಾದಳದ ಅಧ್ಯಕ್ಷರು ಮತ್ತು ಲೋಕಸಭಾ ಸದಸ್ಯರಾದ ಶ್ರೀ ಹೆಚ್ ಡಿ. ದೇವೇಗೌಡರು ಹೇಳಿದ ಮಾತುಗಳು. ಈ ಮಠ ರಾಷ್ಟ್ರಕ್ಕೆ ಮಾದರಿಯಾಗಿ ಮಾರ್ಗದರ್ಶನ ನೀಡುತ್ತಿದೆ. ಇದು ತಪೋಭೂಮಿ, ಸಂಸ್ಕೃತಿಯ ಕೇಂದ್ರ, ಪೂಜ್ಯ ಶ್ರೀ ಶ್ರೀಗಳು ತ್ರಿವಿಧ ದಾಸೋಹ ಸೇವೆಮಾಡಿ 5000 ವಿದ್ಯಾರ್ಥಿಗಳನ್ನು ಯೋಗ್ಯ ನಾಗರಿಕರನ್ನಾಗಿ ಮಾಡುತ್ತಿದ್ದಾರೆ.

ರಾಷ್ಟ್ರಸೇವೆಗೆ ಸಂಪೂರ್ಣವಾಗಿ ಸಮರ್ಪಿಸಿಕೊಂಡಿರುವ ಈ ಮಠವನ್ನು ಸಮಾಜ ವಕ್ರದೃಷ್ಟಿಯಲ್ಲಿ ಅಳೆಯುವ ಧೋರಣೆ ಸರಿಯಲ್ಲ. ಉತ್ತಮ ಸಂಸ್ಥೆಗೆ ಕಪ್ಪು ಲೇಪನ ಹಚ್ಚುವ ಪ್ರಯತ್ನಗಳು ಅಸಭ್ಯ ಲಕ್ಷಣ. ಮಾನವೀಯತೆ ಇಲ್ಲದ ವ್ಯಕ್ತಿಗಳು ದ್ವೇಷಾಸೂಯೆಯಿಂದ ಶ್ರೀ ಮಠದ ಕೀರ್ತಿ, ಪ್ರತಿಷ್ಠೆ, ಗೌರವಗಳಿಗೆ ಕುಂದು ತರಬಾರದು. ಇಂಥ ಹೇಯ ಕೃತ್ಯಗಳನ್ನು ಸಮಾಜ ಕೈ ಬಿಡದೆ ಹೋದರೆ ಲಕ್ಷೋಪಲಕ್ಷ ಬಡ ಹಳ್ಳಿ ಮಕ್ಕಳ ಅಭ್ಯುದಯಕ್ಕಾಗಿ ಶ್ರಮಿಸುತ್ತಿರುವ ಶ್ರೀ ಮಠವನ್ನು ರಕ್ಷಿಸಲು

ಸಂಘರ್ಷಕ್ಕೆ ಇಳಿಯಬೇಕಾಗುತ್ತದೆಂದು ಎಚ್ಚರಿಸಿದರು. ಅರ್ಹತೆ ಯಾರ ಸ್ವತ್ತಲ್ಲ. ಸ್ವಯಂ ಸಾಧನೆಯಿಂದ ಶ್ರೀ ಮಠ ಬೆಳೆದಿದೆ. ಶ್ರೀ ಶ್ರೀಗಳವರ ತ್ಯಾಗದ ಪ್ರಮಾಣ ವರ್ಣಿಸಲಸದಳ. ಅವರ ಸಾನಿಧ್ಯದಲ್ಲಿನ ಸಂಸ್ಕೃತಿಯನ್ನು ಉಳಿಸಿ ಬೆಳೆಸಿ ಎಂದು ವಿದ್ಯಾರ್ಥಿಗಳಿಗೆ ಕರೆಯಿತ್ತರು.

**ಶ್ರೀ ಶ್ರೀಗಳವರ ಆಶೀರ್ವಚನ :-** ಭೇದಭಾವಗಳಿಂದ ಸಮಾಜ ಕಲುಷಿತವಾಗಿದೆ. ಭೇದಗಳು ಕೃತಕ. ರಾಷ್ಟ್ರದ ಏಕತೆ ಮತ್ತು ಐಕ್ಯತೆಗಾಗಿ ಮಹಾನ್ ಬಸವಣ್ಣನವರು ಇವನಾರವ, ಇವನಾರವ ಎನ್ನದೆ, ಇವ ನಮ್ಮವ, ಇವ ನಮ್ಮವ ಎಂಬ ವಾಣಿಯನ್ನು ಸ್ಮರಿಸಿ ಯುವಜನತೆ ಆಧ್ಯಾತ್ಮಿಕ ತಳಹದಿಯಮೇಲೆ ಶಕ್ತಿ ಸಾಮಾರ್ಥ್ಯಗಳನ್ನು ಬೆಳೆಸಬೇಕು. ಆದರ್ಶಗಳನ್ನು ಹೇಳದೆ/ಬೋಧಿಸದೆ ಆಚರಣೆಯಲ್ಲಿ ತೋರಿಸಿ ಮಾರ್ಗದರ್ಶಕರಾಗಬೇಕೆಂದು ಹೇಳಿದರು.

ಪ್ರಾರಂಭದಲ್ಲಿ ಲೋಕೇಶ್‌ಗಾಂಧಿ ಸ್ವಾಗತಿಸಿದರು ಶ್ರೀ ಆರ್. ಬಸವರಾಜ್ ವಂದನೆ ಸಲ್ಲಿಸಿದರು.

### 39ನೇ ಹಳೆಯ ವಿದ್ಯಾರ್ಥಿಗಳ ಸರ್ವಸದಸ್ಯರ ಸಭೆ

ಪೂಜ್ಯ ಶ್ರೀ ಶ್ರೀಗಳವರ ಅಧ್ಯಕ್ಷತೆಯಲ್ಲಿ ಶ್ರೀ ಮಠದ ಹಳೆಯ ವಿದ್ಯಾರ್ಥಿ ಸಂಘದ 39ನೇ ಸರ್ವಸದಸ್ಯರ ಸಭೆ 6-2-94 ಭಾನುವಾರ ಸಮಾವೇಶಗೊಂಡಿತ್ತು. ರಾಜ್ಯದ ಎಲ್ಲಾ ಭಾಗಗಳಿಂದ ಸಹಸ್ರಾರು ಹಳೆಯ ವಿದ್ಯಾರ್ಥಿಗಳು ಆಗಮಿಸಿದ್ದರು. ಸಂಘದ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ತನಿಖಾ ಲೆಕ್ಕಗಳನ್ನು ಮಂಡಿಸಲಾಯಿತು.

1. ವಸ್ತು ಪ್ರದರ್ಶನದ:- ಕಾರ್ಯದರ್ಶಿ ಬಿ. ಗಂಗಾಧರಯ್ಯ
2. ಸಿದ್ಧಗಂಗಾ ಮಾಸ ಪತ್ರಿಕೆ :- ಪ್ರಕಾಶಕ ಹೆಚ್. ಬಿ. ಗಂಗಾಧರಯ್ಯ
3. ಹಳೆಯ ವಿದ್ಯಾರ್ಥಿ ಸಂಘ ಮತ್ತು ವಜ್ರಮಹೋತ್ಸವ ಸಮಿತಿ :-

ಕಾರ್ಯದರ್ಶಿ ಕೆ. ಹೆಚ್. ಶಿವರುದ್ರಯ್ಯ ಇವರುಗಳು ಓದಿದರು. ಸಭೆ ಅನುಮೋದನೆ ನೀಡಿತು.

ಶ್ರೀ ಶ್ರೀಗಳವರ ವಜ್ರಮಹೋತ್ಸವ ಸಮಿತಿ ಅಧ್ಯಕ್ಷರಾದ ಶ್ರೀ ಎಸ್. ಬಿ. ಮುದ್ದಪ್ಪನವರು ನಿರ್ಮಿಸುತ್ತಿರುವ 'ಬೃಹತ್ ಪ್ರಸಾದ ನಿಲಯ' ಮತ್ತು ಹಾಸ್ಟಲ್ ಕಟ್ಟಡಗಳ ಪ್ರಗತಿಯನ್ನು ಸಭೆಗೆ ಪರಿಚಯಿಸಿದರು. ಶೇ 40ಭಾಗ ಕೆಲಸ ಮುಗಿದಿದೆ. ಉಳಿದ ಕೆಲಸ ಮುಗಿಸಲು 2ಕೋಟಿ ರೂಗಳ ಅಗತ್ಯವಿದೆ. ಎಲ್ಲಾ ಹಳೆಯ ವಿದ್ಯಾರ್ಥಿಗಳು ಸಕ್ರಿಯವಾಗಿ ಉದಾರತೆಯಿಂದ 2000/- ರೂಗಳಂತೆ ಸಂಗ್ರಹಿಸಿ ಕೊಡಬೇಕೆಂದು ಕೋರಿದರು.



ಮೇಲ್ವಿಚಾರಕರಾಗಿರುವ ನಿವೃತ್ತ ಸೂಪರಿಂಟೆಂಡೆಂಟ್ ಇಂಜಿನಿಯರ್ ಶ್ರೀ ಎಂ. ಎನ್ ನಾಗರಾಜಯ್ಯ ನವರು ಮಾತನಾಡಿ ಏಕಕಾಲದಲ್ಲಿ 3,500 ಮಂದಿ ಕುಳಿತು ಊಟ ಮಾಡುವ ಮತ್ತು ಸುವ್ಯವಸ್ಥಿತವಾದ ಉಗ್ರಾಣ ಸಮೇತ ಸೌಲಭ್ಯಹೊಂದಿ ರಚಿತವಾಗುತ್ತಿದೆ. ಇಷ್ಟುದೊಡ್ಡ ಪ್ರಮಾಣದ ಪ್ರಸಾದನಿಲಯ ಶ್ರೀ ಶ್ರೀ ಗಳವರ ದಾಸೋಹ ಮಣಿಹಕ್ಕೆ ಭಾರತದಲ್ಲಿ ಮೇರುಕೃತಿಯಾಗಿದೆ ಎಂದರು. ಸುಂದರವಾಸ್ತು ಶಿಲ್ಪದಿಂದ ಹಾಸ್ಟಲ್ ನಿರ್ಮಾಣವಾಗುತ್ತಿದೆ. 1500 ವಿದ್ಯಾರ್ಥಿಗಳಿಗೆ ಅವಕಾಶವಿದೆ. 3ಬ್ಲಾಕ್ ವಿಂಗಡಿಸಿದೆ. ಇಂಥ ಬೃಹತ್ ಸ್ಮಾರಕಗಳ ರಚನಾ ಸೇವೆಯಲ್ಲಿ ತೊಡಗಲು ಅವಕಾಶ ದೊರೆತದ್ದು ನನ್ನ ಪುಣ್ಯದ ಫಲವೆಂದು ಶ್ರೀ ಶ್ರೀಗಳವರ ಸನ್ನಿದಿಗೆ ಕೃತಜ್ಞತೆ ಅರ್ಪಿಸಿದರು.

ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ಮಾತನಾಡಿ ಈಸಭೆ ಶ್ರೀ ಶ್ರೀಗಳವರ ವಜ್ರವಹೋತ್ಸವ ಪ್ರತಿಷ್ಠಾನದ ಮಹಾಕಾರ್ಯಗಳನ್ನು ಪೂರ್ಣವಾಗಲು ಗಂಭೀರ ಚಿಂತನೆಮಾಡಿ ಸಹಕಾರನೀಡಬೇಕೆಂದು ಕರೆಯಿತ್ತರು.

ಅನೇಕ ಹಿರಿಯ ಹಳೆವಿದ್ಯಾರ್ಥಿಗಳು ನಿಧಿ ಸಂಗ್ರಹಣೆಯಲ್ಲಿ ತುಂಬಾ ಸಹಕಾರ ನೀಡಬೇಕೆಂದು ಕೋರಿದರು.

### .: ಶ್ರೀ ಶ್ರೀ ಗಳವರ ಆಶೀರ್ವಚನ :.

ಆದರಾಭಿಮಾನಿಗಳಿಂದ ಕಲೆತು ಶ್ರೀ ಮಠದ ಪ್ರಗತಿಬಗ್ಗೆ ಚರ್ಚಿಸುತ್ತಿರುವುದು ಅಭಿಮಾನದ ಸಂಗತಿ. ವಿದ್ಯಾರ್ಥಿಸಮುದಾಯಕ್ಕೆ ಬೇಕಾದ ಅಗತ್ಯಪೂರೈಕೆಗಳಿಗಾಗಿ ವಜ್ರವಹೋತ್ಸವಕ್ಕೆ ಒಪ್ಪಿಗೆ ನೀಡಬೇಕಾಯಿತು. ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯುತ್ತಾ ಇದೆ. ಕೊರತೆ ಆವಶ್ಯಕತೆಗಳು ಜಾಸ್ತಿಯಾಗಿವೆ. ಈಗ ರೂಪಿಸಿರುವ ಯೋಜನೆಗಳು ಪೂರ್ಣವಾಗಲು ನಿಧಿ ಸಂಗ್ರಹದ ಅಗತ್ಯವಿದೆ. ಒತ್ತಾಯವಾದ ಹಣ ವಸೂಲಿಬೇಡ. ಇದು ಎಲ್ಲರಿಗೂ ಶ್ರೀ ಮಠದ ಮೇಲೆ ಅಭಿಮಾನವಿದೆ. ಜನಸಂಪರ್ಕಮಾಡಿ ಎಲ್ಲರೂ ಪ್ರಯತ್ನಮಾಡಿದರೆ ಹಸಿಗೂಡಿದರೆ ಹಳ್ಳದಂತೆ ಹಣ ಸಂಗ್ರಹವಾಗುತ್ತದೆ.

ಶ್ರೀ ಎಸ್. ಬಿ. ಮುದ್ದಪ್ಪ ನವರು ಸ್ವಂತ ಕಾರ್ಯಗಳನ್ನು ಬಿಟ್ಟು ಪ್ರಾಮಾಣಿಕರಾಗಿ ಶ್ರಮಿಸುತ್ತಿದ್ದಾರೆ. ಅವರ ಸೇವಾ ವಿಸ್ತರಣೆ ಶ್ಲಾಘನೀಯವಾಗಿದೆ ಎಂದು ಹೇಳಿದರು.

ಪ್ರಧಾನ ಕಾರ್ಯದರ್ಶಿ ಶ್ರೀ ಎಂ.ಎನ್. ಚನ್ನಬಸಪ್ಪ ಸ್ವಾಗತಿಸಿದರು. ಸಹ ಕಾರ್ಯಧರ್ಶಿ ಶ್ರೀ ಕೆ. ವೀರಭದ್ರಯ್ಯ ವಂದಿಸಿದರು.

## ಸಂಯುಕ್ತ ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವ

8-2-94 ಭಾನುವಾರ ಶ್ರೀ ಮಠದ ವಿದ್ಯಾಸಂಸ್ಥೆಗಳ ವಾರ್ಷಿಕೋತ್ಸವ ಸಮಾರಂಭ ನೆರವೇರಿತು.

ಪ್ರೊ॥ ಶ್ರೀ ಶಾಂತವೀರಪ್ಪನವರು ಆಟ ಮತ್ತು ಕ್ರೀಡೆಗಳಲ್ಲಿ ವಿಜೇತರಾದ ವಿದ್ಯಾರ್ಥಿಗಳಿಗೆ ಬಹುಮಾನಗಳನ್ನು ನೀಡಿ ಗೆದ್ದವರು ದ್ವೇಷಾಸೂಯೆ ಪಡದೆ ಸೋತವರು ದುಃಖ ಪಡದೆ ವರ್ತಿಸಬೇಕು. ಹೆಚ್ಚಿನ ಪ್ರತಿಭೆಗಾಗಿ ಸಾಧನಾಪರರಾಗಬೇಕು. ಶ್ರೀ ಮಠ ಮತ್ತು ಶ್ರೀ ಶ್ರೀ ಗಳವರು ನಂಬಿಕೆ-ಭರವಸೆಗಳ ಪ್ರತೀಕವಾದ ದ್ವೀಪವಾಗಿದೆ ಎಂದರು.

ಮುಖ್ಯ ಅತಿಥಿಗಳಾಗಿ ಬೆಂಗಳೂರು ಮಹಾನಗರ ಪಾಲಿಕೆಯ ಉಪ ಮೇಯರು ಶ್ರೀ ಕೆ.ಎನ್. ಸುಂದರಾಜಲು ಮಾತನಾಡಿ ಶ್ರೀ ಮಠ ಶಿಕ್ಷಣದಲ್ಲಿ ವಿಶ್ವದಲ್ಲೇ ಖ್ಯಾತಿ ಪಡೆದಿದೆ. ಇಲ್ಲಿಗೆ ನೀವು ನೀಡುವ ಕೊಡುಗೆ ಉತ್ತಮ ವಿದ್ಯಾವಂತರಾಗಿ ರಾಷ್ಟ್ರದ ಉನ್ನತ ಹುದ್ದೆಗಳನ್ನು ಅಲಂಕರಿಸಬೇಕು. ಸದ್ಗುಣಿಗಳಾಗಬೇಕು ಎಂದು ಹಾರೈಸಿದರು.

ಅಧ್ಯಕ್ಷತೆ ವಹಿಸಿದ್ದ ತುಮಕೂರು ಲೋಕೋಪಯೋಗಿ ಇಲಾಖೆ ಇಂಜಿನಿಯರ್ ಶ್ರೀ ಜಿ.ಎನ್. ಹರೀಶ್‌ಕುಮಾರ್ ಮಾತನಾಡಿ ವಿದ್ಯಾರ್ಥಿ ಜೀವನ ಪವಿತ್ರವಾದದು. ಜ್ಞಾನದಾಹ ಉಳ್ಳವರಾಗಿರಬೇಕು. 25 ವರ್ಷಗಳಲ್ಲಿ ಕಲಿತ ವಿದ್ಯೆ ಮುಂದಿನ 75 ವರ್ಷಕ್ಕೆ ದಾರಿ ದೀಪವಾಗುತ್ತದೆ. ಶ್ರೀ ಶ್ರೀ ಗಳವರ ಸಾನ್ನಿಧ್ಯವೇ ನಿಮಗೆ ಜ್ಞಾನ ಭಂಡಾರವಾಗಿದೆ. ಪ್ರತಿಭಾನ್ವಿತರಾಗಬೇಕೆಂದು ಕರೆಯಿತ್ತರು.

## ಶ್ರೀ ಶ್ರೀ ಗಳವರ ಆಶೀರ್ವಚನ

ವ್ಯಕ್ತಿಯ ಸಮಗ್ರ ವಿಕಾಸವೇ ಶಿಕ್ಷಣ. ದೇಹ, ಬುದ್ಧಿ, ಆತ್ಮ ಬೆಳವಣಿಗೆಯಾಗಬೇಕು. ನಮ್ಮದು ಎನ್ನುವುದು "ಜ್ಞಾನರತ್ನ" ಪ್ರಭೂದೇವರವಾಣಿ. ವಿಮರ್ಶಾತ್ಮಕ ಜ್ಞಾನ ಮುಖ್ಯ. ಒಳ್ಳೆಯದನ್ನು ಗ್ರಹಿಸಬೇಕು. ಕೆಟ್ಟದನ್ನು ಬಿಡಬೇಕು. ಜೀವನ ಅನೇಕ ಸಮಸ್ಯೆಗಳಿಂದ ಸುತ್ತುವರೆದಿದೆ. ಪರಿಹಾರಕ್ಕೆ ವಿದ್ಯೆಯೇ ಮೂಲ. ಗಳಿಕೆಗಾಗಿ ನಿರಂತರ ಶ್ರಮಿಸಿ ಸಾಧನೆ ಮಾಡಬೇಕು. ಕಾಲವನ್ನು ಕ್ರಮವರಿತು ವಿನಿಯೋಗಿಸಬೇಕು ನಮ್ಮ ದೇಶ ನೀತಿ ಧರ್ಮಕ್ಕೆ ಕೇಂದ್ರವಾಗಿತ್ತು. ಈ ಮೌಲ್ಯಗಳು ಮರೆಯಾಗುತ್ತಿವೆ. ಆದರ್ಶವಾದ ವ್ಯಕ್ತಿತ್ವ ರೂಪಿಸಿಕೊಳ್ಳುವಲ್ಲಿ ಸದಾ ಜಾಗೃತರಾಗಿ ಅಭ್ಯಾಸ-ಸಾಧನೆಗಳತ್ತ ಗಮನಹರಿಸಬೇಕೆಂದು ಹೇಳಿದರು.

ಶ್ರೀ ಜಿ. ಹೆಚ್. ಗಂಗಾಧರಯ್ಯ ವರದಿಓದಿ ಕಾರ್ಯಕ್ರಮ ನಿರೂಪಿಸಿದರು. ಶ್ರೀ ಬಿ. ಪಿ. ಬಸವರಾಜ್ ಸ್ವಾಗತಿಸಿದರು. ಶ್ರೀ ಪಿ. ಆರ್ ಸೋಮಶೇಖರಯ್ಯ ವಂದಿಸಿದರು.

ರಿಕಾ ನೀತಿಯ ಫಲವಾಗಿ ಈ ಶತಮಾನದ ಅಂತ್ಯದೊಳಗೆ ರಾಜ್ಯದಲ್ಲಿ 26 ಲಕ್ಷಕ್ಕೂ ಹೆಚ್ಚು ಜನರಿಗೆ ಉದ್ಯೋಗ ಅವಕಾಶ. ವಿಶ್ವ ಮಾರುಕಟ್ಟೆಗೆ ಸಾಫ್ಟ್‌ವೇರ್ ಉಪಕರಣಗಳನ್ನು ಅಭಿವೃದ್ಧಿಪಡಿಸಲು ಸಿಂಗಪೂರ್ ಸರ್ಕಾರದ ಆರ್ಥಿಕ ನೆರವಿನೊಂದಿಗೆ ಬೆಂಗಳೂರಿನಲ್ಲಿ ಇನ್‌ಫೋ ಟೆಕ್ನಾಲಜಿ ಪಾರ್ಕಿನ ಸ್ಥಾಪನೆ.

**ಅಧಿಕಾರ ವಿಕೇಂದ್ರೀಕರಣದ ದಿಟ್ಟ ಹೆಜ್ಜೆ :-** ಸಂವಿಧಾನದ 73 ನೇ ತಿದ್ದುಪಡಿಯನ್ವಯ ಚುನಾವಣೆ ನಡೆಸುವಲ್ಲಿ ಪ್ರಥಮ ರಾಜ್ಯವಾಗಿದೆ. ಇದರಿಂದ ಕೆಳಹಂತದಿಂದ ಪ್ರಜಾಪ್ರಭುತ್ವ ಬಲವರ್ಧನೆ.

**ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರಿಗೆ ಸವಲತ್ತುಗಳು ಸಾಮಾಜಿಕ ಅಭಿವೃದ್ಧಿಯ ಸಂಕಲ್ಪ:-** ಕರ್ನಾಟಕ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದವರ ಅಭಿವೃದ್ಧಿ ನಿಗಮಕ್ಕೆ ಅನುದಾನವನ್ನು 3.20 ಕೋಟಿರೂ ಪಾಯಿಗಳಿಗೆ ಹೆಚ್ಚಿಸಲಾಗಿದೆ. ಪರಿಶಿಷ್ಟರಿಗಾಗಿ 36 ಕೋಟಿ ರೂಪಾಯಿಗಳ ವೆಚ್ಚದಲ್ಲಿ 25 ಸಾವಿರ ಮನೆಗಳ ನಿರ್ಮಾಣ 50-55 ಕೋಟಿ ರೂ. ಗಳ ವೆಚ್ಚದಲ್ಲಿ ಪರಿಶಿಷ್ಟ ಜಾತಿ/ವರ್ಗದ ವಿದ್ಯಾರ್ಥಿ ನಿಲಯಗಳ ನಿರ್ಮಾಣಕ್ಕಾಗಿ ಉದ್ದೇಶಿದೆ. ಸರ್ಕಾರವು ಪರಿಶಿಷ್ಟಜಾತಿ/ಪಂಗಡದವರಿಗೆ 1000 ಆಟೋರಿಕ್ಷಾಗಳ ವಿತರಣೆ, ಭೂಮಿ ನೀರಾವರಿ ಪಂಪ್‌ಸೆಟ್‌ಗಳು ಮತ್ತು ವ್ಯಾನ್‌ಗಳ ವಿತರಣೆಯ ಹಕ್ಕುಪತ್ರಗಳನ್ನು ಇತ್ತೀಚೆಗೆ ನೀಡಿದೆ.

ಸಾಮಾಜಿಕ ಸೌಲಭ್ಯಗಳಿಂದ ವಂಚಿತರಾಗಿರುವ ಜನತೆಯ ಕಲ್ಯಾಣಕ್ಕಾಗಿ ಸರ್ಕಾರವು ಸಂಪತ್ತು, ನೀಲಕ್ರಾಂತಿ, ಸಾಗರದೀಪ, ನೆರಳಿನಭಾಗ್ಯ, ಬೆಳ್ಳಿಬೆಳಕು ಆಶಾಕಿರಣ, ಉದ್ಯೋಗ ಜ್ಯೋತಿಯಂತಹ ಹತ್ತು ಹಲವಾರು ಯೋಜನೆಗಳನ್ನು ಜಾರಿಗೆ ತಂದು ಅವುಗಳನ್ನು ಅನುಷ್ಠಾನಗೊಳಿಸಿದೆ.

ಸಮರ್ಥ ಸಧೃಡ ಮತ್ತು ಪ್ರಗತಿದಾಯಕ ನವಕರ್ನಾಟಕ ನಿರ್ಮಾಣ ನಮ್ಮ ಏಕೈಕ ಧ್ಯೇಯ, ಈ ಧ್ಯೇಯ ಸಾಧನೆಗಾಗಿ ಹಾಗೂ ಜನತೆಯ ಕ್ಷೇಮಾಭಿವೃದ್ಧಿ ಸಾಧಿಸಲು ನಾವೆಲ್ಲರೂ ಒಗ್ಗೂಡಿ ಅವಿರತ ಶ್ರಮಿಸೋಣ.

"ಕರ್ನಾಟಕ ಸರ್ಕಾರವು ತನ್ನ ಜನತೆಗೆ ಗಣರಾಜ್ಯೋತ್ಸವದ ಶುಭ ಹಾರೈಸುತ್ತದೆ."

ಕರ್ನಾಟಕ ವಾರ್ತೆ

"SIDDAGANGA" MONTHLY Reg. No. KRNQ-9

॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥



ಅವಾಚ್ಯಾತ್ಮಸ್ವರೂಪಾಯ ಶಿವಭಾವ ಪ್ರದಾಯಿನೇ ।
ನಮಸ್ಸದ್ಗುರುನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

## ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಜಾತ್ರಾಮಹೋತ್ಸವಾಹ್ವಾನ ಪತ್ರಿಕಾ

ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರು.

**ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ 1915 ನೇ ಶ್ರೀಮುಖ ನಾಮ ಸಂವತ್ಸರದ**

| | | | | |
|---|---|---|---|---|
| ಮಾಘ ಬಹುಳ | ಷಷ್ಠಿ | ಗುರುವಾರ | 3-3-1994 | ವೃಷಭವಾಹನ ಮತ್ತು ನವಿಲುವಾಹನ |
| ,, | ಸಪ್ತಮಿ | ಶುಕ್ರವಾರ | 4-3-1994 | ಹುಲಿವಾಹನ ಮತ್ತು ನಂದಿವಾಹನ |
| ,, | ಅಷ್ಟಮಿ | ಶನಿವಾರ | 5-3-1994 | ಹುತ್ತದವಾಹನ ಮತ್ತು ಅಶ್ವವಾಹನ |
| ,, | ನವಮಿ | ಭಾನುವಾರ | 6-3-1994 | ಮುತ್ತಿನ ಪಾಲಕಿ ಉತ್ಸವ |
| ,, | ದಶಮಿ | ಸೋಮವಾರ | 7-3-1994 | ಸಿಂಹವಾಹನ ಮತ್ತು ರಾವಣವಾಹನ |
| ,, | ಏಕಾದಶಿ | ಮಂಗಳವಾರ | 8-3-1994 | ಗಜವಾಹನ ಮತ್ತು ಶೇಷವಾಹನ |
| ,, | ದ್ವಾದಶಿ | ಬುಧವಾರ | 9-3-1994 | ಬಿಲ್ವವೃಕ್ಷವಾಹನ ಮತ್ತು ನವರಂಗಪಾಲಕಿ ಉತ್ಸವ |
| ,, | ತ್ರಯೋದಶಿ | ಗುರುವಾರ | 10-3-1994 | ಮಹಾಶಿವರಾತ್ರಿ ಪೂಜಾದಿಗಳು ಮುತ್ತಿನಪಾಲಕಿ |
| ,, | ಚತುರ್ದಶಿ | ಶುಕ್ರವಾರ | **11-3-1994** | **ರಥೋತ್ಸವ & ರುದ್ರಾಕ್ಷಿಮಂಟಪೋತ್ಸವ** |
| ● | ಅಮವಾಸ್ಯೆ | ಶನಿವಾರ | **12-3-1994** | **ಬೆಳ್ಳಿಪಾಲಕಿ ಉತ್ಸವ** |
| ಫಾಲ್ಗುಣ ಶುದ್ಧ | ಪಾಡ್ಯ | ಭಾನುವಾರ | **13-3-1994** | **ತೆಪ್ಪೋತ್ಸವ ಮತ್ತು ಪಂಚಬ್ರಹ್ಮೋತ್ಸವ** |

ಮಾಮೂಲಿನಂತೆ " ಎತ್ತಿನ ಪರಿಷೆಯೂ " ದಿನಾಂಕ 7-3-1994 ನೇ ಸೋಮವಾರ ದನಗಳ ಪ್ರದರ್ಶನ ಮತ್ತು ಉತ್ತಮ ರಾಸುಗಳಿಗೆ ಬಹುಮಾನ ವಿನಿಯೋಗವು ನಡೆಯುವಂತೆ ಏರ್ಪಡಿಸಿದೆ. " ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನ " ಫೆಬ್ರವರಿ 5 ರಿಂದ ಮಾರ್ಚಿ 15 ವರೆಗೆ ಪ್ರತಿ ದಿವಸವೂ ಸಾಯಂಕಾಲ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವಂತೆ ಏರ್ಪಾಡು ಮಾಡಲಾಗಿದೆ.

**ಸರ್ವರೂ ಎಲ್ಲಾ ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.**

ಶ್ರೀ ಸಿದ್ಧಗಂಗಾ ಮಠ

**ಶ್ರೀ ಶ್ರೀ ಶಿವಕುಮಾರಸ್ವಾಮಿಗಳು.**

ವಿ. ಸೂ. ಜಾತ್ರೆಗೆ ಎತ್ತುಗಳನ್ನು ದಿನಾಂಕ 28-2-1994 ನೇ ಸೋಮವಾರ ಕಳೆದ ನಂತರವೇ ಹೊಡೆದುಕೊಂಡು ಬರಬೇಕು.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ 572 104.